Photo by A. L. Syed



ಬಹುಮಾನ
ಪಡೆದ ಶೀರ್ಷಿಕೆ

ಇದು ಧೈರ್ಯ

ಕಳಿಸಿದವರು:
ಜಿ. ಗಿರಿಜ

ಮಗುವನ್ನು

ಕಿ ರು ನ ಗೆ

ಯಿ ಂ ದ

ಇ ರಿ ಸಿ



ಮಗು ಕಿರಿಕಿರಿ ಮಾಡಿದರೆ ರುಚಿಕರವಾದ ಈ "ನರಿಷಿಂಗ್ ಬಿಸ್ಕಟ್"ಗಳನ್ನು ಕೊಡಿ; ಎಂದಿನಂತೆ ಕಿರುನಗುತ್ತಿರುತ್ತೆ




ಜೆ. ಬಿ. ಮಂಘಾರಾಮ್‌ರವರ

**ನರಿಷಿಂಗ್ ಬಿಸ್ಕಟ್ಟುಗಳು**

ವಿಟಮಿನ್ನುಗಳಿಂದ

ತುಂಬಿದುವು

**J. B. MANGHARAM & CO.**

GWALIOR

ಬ್ರಾಂಚ್ : 35/37, ತಂಬುಚೆಟ್ಟಿ ಬೀದಿ, ಜಿ. ಟಿ. ಮದ್ರಾಸು.

"ನನ್ನ ಚರ್ಮಕ್ಕೆ ಪರಿಶುದ್ಧವಾದ
ಸಾಬೂನು ಅಗತ್ಯ!"

ಮೈಸೂರು ಸ್ಯಾಂಡಲ್ ಸೋಪಿನಲ್ಲಿರುವ ಪರಿಮಳ ಮತ್ತು ಔಷಧಗುಣಗಳು ಮಗುವನ್ನು ಶುಭ್ರವಾಗಿ ತೊಳೆಯುವುದೇ ಅಲ್ಲದೆ ಮಗುವಿನ ಎಳೆಯ ಚರ್ಮ ಹುಣ್ಣಾಗದಂತೆಯೂ ನೋಯದಂತೆಯೂ ಕಾಪಾಡುತ್ತದೆ.



'my skin needs a pure soap!"

ಮೈಸೂರು ಸ್ಯಾಂಡಲ್ ಸೋಪ್





ಗವರ್ನಮೆಂಟ್ ಸೋಪ್ ಫ್ಯಾಕ್ಟರಿ
ಬೆಂಗಳೂರು
(ಐ. ಎಸ್. ಟಿ. ಎಮ್. ಎ. ಸದಸ್ಯರು)




SWEETS

ನಿಮ್ಮ ಸವಿ ಸುಖಕ್ಕೆ
ನ್ಯೂಟ್ರೈನ್
ಶ್ರೇಷ್ಠತೆಯ
ಮಿಠಾಯಿಗಳು

ದಿ ನ್ಯೂಟ್ರೈನ್ ಕನ್‌ಫೆಕ್ಷನರೀ ಕಂ.ಲಿಡ್.
ಚಿತ್ತೂರು - ಆಂಧ್ರ.

ಬೆಂಗಳೂರು ಆಫೀಸ್:
6, ಐದನೇ ಮೈನ್‌ರೋಡು, ಚಾಮರಾಜಪೇಟೆ.



ಡೋಂಗರೇ ಬಾಲಾಮೃತ



ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರಬೀಳಲು ಸಹಾಯವಾಗುತ್ತದೆ.

POST-BOX NO. 713 TEL: VIJAYAFILM PHONE: 3538

# VIJAYA TALKIE DISTRIBUTORS

MOTION PICTURE DISTRIBUTORS

KEMPEGOWDA ROAD :: BANGALORE CITY

ತಾ. 24-10-1954

ಇಂಡಿಯಾದೊಳಗಿನ

**ತಮಿಳು, ತೆಲುಗು, ಕನ್ನಡ ಮತ್ತು ಹಿಂದೀ ಪ್ರೊಡ್ಯೂಸರುಗಳಿಗೆ**

ಅಯ್ಯಾ,

ಈ ದೀಪಾವಳಿಯ ಶುಭಸಮಯದಲ್ಲಿ ನಿಮಗೆಲ್ಲಾ ನಮ್ಮ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಸಮರ್ಪಿಸುತ್ತೇವೆ. ಹೊಸ ವರ್ಷದಲ್ಲಿ ನೀವು ದೊಡ್ಡ ಬಾಕ್ಸಾಫೀಸು ಚಿತ್ರಗಳನ್ನು ನಿರ್ಮಿಸಿ ಅವುಗಳಿಗೆ ಘನವಾದ ಆರ್ಥಿಕವಿಜಯವನ್ನು ಕೈಗೂಡಿಸಲು ನಮಗೆ ಒಪ್ಪಿಸಿಕೊಡಿರಿ.

ಈ ವರ್ಷದಲ್ಲಿ ಮೈಸೂರು ಸಂಸ್ಥಾನದೊಳಗಿನ ಇತರ ಡಿಸ್ಟ್ರಿಬ್ಯೂಟರುಗಳಿಂದ ಒಟ್ಟು ಎಷ್ಟು ಚಿತ್ರಗಳು ಬಿಡುಗಡೆಯಾಗಿವೆಯೋ ಅಷ್ಟೇ ಚಿತ್ರಗಳನ್ನು ನಾವು ಒಬ್ಬರುಮಾತ್ರವೇ ಬಿಡುಗಡೆ ಮಾಡಿದ್ದೇವೆಂದು ಈ ಸಂದರ್ಭದಲ್ಲಿ ಹೇಳಿಕೊಳ್ಳಲು ಸಂತೋಷಿಸುತ್ತೇವೆ.

ಈ ವಿವರಗಳನ್ನು ಗಮನಿಸಿರಿ:

(1) ಕೆಳಗಿನ ಪ್ರಖ್ಯಾತ ನಿರ್ಮಾಪಕರಿಗೆ ನಾವು ಶಾಶ್ವತ ಡಿಸ್ಟ್ರಿಬ್ಯೂಟರುಗಳಾಗಿದ್ದೇವೆ:
    ವಿಜಯಾ ಪ್ರೊಡಕ್ಷನ್ಸ್ ಲಿಮಿಟೆಡ್. ಪಕ್ಷಿರಾಜಾ ಸ್ಟೂಡಿಯೋಸ್.
    ಮಾಡರ್ನ್ ಥಿಯೇಟರ್ಸ್ ಲಿಮಿಟೆಡ್. ಭರಣಿ ಪ್ರೊಡಕ್ಷನ್ಸ್.

(2) ನಾವು ಈ ವರ್ಷದಲ್ಲಿ ' ಮನೋಹರ, ಜಲದುರ್ಗ, ತುಳಿವಿಷಂ, ಪರಿವರ್ತನ, ಧರ್ಮಪತ್ನಿ ಮೊದಲಾದ ಬೇರೆ ನಿರ್ಮಾಪಕರ ಚಿತ್ರಗಳನ್ನು ಕೂಡಾ ಡಿಸ್ಟ್ರಿಬ್ಯೂಟ್ ಮಾಡಿದ್ದೇವೆ.

(3) ಈ ವರ್ಷ ಈವರೆಗೆ ನಾವು ಬಿಡುಗಡೆ ಮಾಡಿದ ಚಿತ್ರಗಳು ಒಟ್ಟು ಸಂಖ್ಯೆ 17.

ಆದುದರಿಂದ ನೀವು ಒಳ್ಳೆಯ ಚಿತ್ರಗಳನ್ನು ನಿರ್ಮಿಸಿ ನಮಗೆ ಡಿಸ್ಟ್ರಿಬ್ಯೂಷನ್ನಿಗೆ ಒಪ್ಪಿಸಬೇಕೆಂದು ಕೋರುತ್ತ, ಉಭಯತ್ರ ಲಾಭದಾಯಕವಾಗಿ ಇರುವಂತೆ ನಾವು ಸಂಪೂರ್ಣ ಸಹಕರಿಸಬಲ್ಲೆವೆಂದು ವಿನಂತಿ ಮಾಡಿಕೊಳ್ಳುತ್ತೇವೆ.

## ನಿಮ್ಮಲ್ಲಿ ಹೊಸ ಚಿತ್ರ ಇರುವಾಗಲೆಲ್ಲಾ ನಮಗೆ ಬರೆಯಿರಿ.

ಯಾವಾಗಲೂ ನಿಮ್ಮ ಸೇವೆಗೆ ಹಾರೈಸುವ

**ಬಿ. ಎನ್. ಗುಪ್ತ**

ಭಾಗಸ್ಥರು



# ದೀಪಾವಳಿಯ ಶುಭಾಶಯಗಳು

ದೀಪಾರಾಧನೆಯ ಈ ಶುಭಸಮಯದಲ್ಲಿ ಮನೆಮನೆಗಳಲ್ಲೂ ಬೆಳಗುವ ಜ್ಯೋತಿಯಂತೆ ಅನುನಿತ್ಯವೂ ನಮ್ಮ ಜನಾದರಣೀಯ

**ಕಸ್ತೂರಿ ಬಾರ್ ಸೋಪಿನಿಂದ**
**ನಿಮ್ಮ ವಸ್ತ್ರಗಳು ಬೆಳ್ಳಗಾಗಲಿ!**

*ನಿಮ್ಮ ಬಟ್ಟೆಗಳ ಶುಭ್ರತೆಗೆ*
*ಪ್ರತೀಯೋರ್ವ ಗೃಹಿಣಿಯ ಮನ್ನಣೆಗೆ*
*ಪಾತ್ರವಾಗಿರುವ*

## ಕಸ್ತೂರಿ
## ಬಾರ್ ಸೋಪು

**ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್.** ಹೆಡ್ ಆಫೀಸು: ಮಂಗಳೂರು
ಬ್ರಾಂಚ್:- ತುಮಕೂರು

ಎಲ್ಲಾ ಕಡೆಗಳಲ್ಲೂ ದೊರೆಯುತ್ತದೆ.



# ಈ ವಿಜಯ ದೀಪಾವಳಿಯ

ಶುಭ ಸಮಯದಲ್ಲಿ

ನಮ್ಮ ಪ್ರಿಯ ವಾಚಕರಿಗೆ

ಏಜೆಂಟರಿಗೆ

ಜಾಹೀರಾತುದಾರರಿಗೆ

ಜಾಹೀರಾತು ಸಲಹೆಗಾರರಿಗೆ

ಸಮಸ್ತ ಸುಖ ಸಮೃದ್ಧಿಗಳನ್ನು ಬಯಸಿ

ಅಭಿನಂದಿಸುತ್ತೇವೆ



ಚಂದಮಾಮ ಪಬ್ಲಿಕೇಷನ್ಸ್

ಮದರಾಸು – **26.**



## ಈ ಸಂಚಿಕೆಯಲ್ಲಿ



ಅಲ್ಲದೆ, ನಗೆಹನಿ, ಚುಟಿಕಗಳು, ಫೋಟೋ ಸ್ಪರ್ಧೆ, ಚಿತ್ರಕಥೆ ಎಲ್ಲಾ ಇವೆ.



# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

## ಹ ರ ಕೆ

ಭೇದಭಾವನೆ ಯಳಿದು ಜನರಲಿ  
ಬಂಧುಪ್ರೇಮವು ಬೆಳೆಯಲಿ  
ಎಲ್ಲರೊಮ್ಮತದಿಂದ ನಿತ್ಯವು  
ನಾಡಿನೊಳಿತಿಗೆ ದುಡಿಯಲಿ.

ಸಾಧುಸಂತರು, ದೇಶಭಕ್ತರು  
ವೀರಮಾತೆಯ ಉದಿಸಲಿ  
ಶಿಲ್ಪಿ, ಕವಿಗಳು, ಗಂಡುಗಲಿಗಳು  
ನಾಡಕೀರ್ತಿಯ ಬೆಳಗಲಿ.

ಸತ್ಯಶಾಂತಿಯ ದಿವ್ಯ ತತ್ವವು  
ಜನಮನದಿ ಮನೆಮಾಡಲಿ  
ಗಾಂಧಿತಾತನ ರಾಮರಾಜ್ಯದ  
ಕನಸು ನೆನಸನು ಕಾಣಲಿ.

ಕಾಲಕಾಲಕೆ ಮಳೆಯು ಸುರಿಯಲಿ  
ಹಸುರು ಹೊಲ ಬನ ಮೆರೆಯಲಿ  
ನಕ್ಕುನಲಿಯುತ ಜನವು ಬಾಳಲಿ  
ಜಗಕೆ ಮಂಗಳವಾಗಲಿ.

ಪ. ಸೀತಾರಾಮಭಟ್ಟ

ಸಂಪುಟ ೧೩ : ನವಂಬರ್ ೧೯೫೪ : ಸಂಚಿಕೆ ೫





# ಕಳ್ಳರ ಕಳ್ಳ!

ಮಾವಿನ ಗೂಡೇ ಎಂಬ ಊರಿನಲಿ
ಮಾಧವನೆಂಬೋ ಹುಡಗ
ಶೀನ ಎಂಬ ಸಣ್ಣವನೊಡ ಗೂಡಿ
ಊರ ಸುತ್ತುವಾ ತುಡುಗ.
ಮಾವಿನಗೂಡೇ ಮಾವಿನಹಣ್ಣಿಗೆ
ಹೆಸರುಹೋದ ಊರೇ.
ದಾರಿಯುದ್ದಕೂ ತುಂಬಿದ ಮರಗಳು
ದೋರೆವಣ್ಣು ಬಾಯಿನ್ನಾರೂರೆ.
ಆದೊಡೆ ಕಾವಲು ಕಂಚಪ್ಪಣ್ಣ
ಕಾಯುತಿದ್ದನಾ ತೋಟದಲಿ





ಮಾಘವನೊಂದು ಯುಕ್ತಿಮಾಡಿ, ಅಂ
ದನು ಕಂಚಪ್ಪಣ್ಣನ ಕಿವಿಲಿ :
" ನೋಡಗೊ ಶೀನಾ, ಮಾವಿನಹಣ್ಣಾ
ಕಳ್ಳವುಮಾಡೆ ನಿಂತಿದ್ದಾನೆ,
ಹೋಗೋ, ಹಿಡಿಯೋ" ಎನ್ನಲು ಕಂಚ
ಪ್ಪಣ್ಣನು ಓಡದೆಬಿಟ್ಟಾನೆ?
ಶೀನನ ಓಡಿಸಿಕೊಂಡಾತನು ಬಲು
ದೂರ ಓಡಿಹೋದಾಗ,
ಮಾಧವ ನೇರೀ ಮಾವಿನಮರವ
ಹಣ್ಣು ಕೊಯ್ದು ಸಂಚಿಗೆ ಬೇಗ.
ತುಂಬಿದ ಸಂಚಿಯು ದೂರಕೆ ಒಯ್ದು
ಪೊದರಿನ ಮರೆಯಲಿ ಅಡಗಿಸಿದ
ಇವನೂ ಕಾಣದ ಮುಸ್ತಾನ್ ಕಳ್ಳ
ಆಕಡೆ ಯಿದ್ದೇ ಕಂಡ ನಿದ!








" ಮಾರಂಗ "

ಬಂದನು ಶೀನ, ಸಂಚಿಯು ತೆರೆದು
ಕಂಡರು ಒಳಗಿನ ಮಾಯೆ !
ಕದ್ದಹಣ್ಣು ಎಷ್ಟಷ್ಟೇ ಇದ್ದಾ
ಮೊದ್ದುಗಲ್ಲುಗಳ ಕಂಡು
ಬಾಯ್ಬಿಡಲವರು, ಮಸ್ತಾನ್ ಅಂದನು :
" ಹೋಗಿ ಟೋಪಿ ಹಾಕ್ಕೊಂಡು !"
ಸದ್ದನು ಕೇಳಿ ಮಸ್ತಾನ್ ದಾಡಿಯು
ಕಾಣುತಲೀ ಜತೆಕಳ್ರೂ,
ಕಣ್ ಕಣ್ ಬಿಟ್ಟು ತಲೆ ಬಾಗಿಸುತ
ಓಡೀ ಕಣ್ ಮರೆಯಾದ್ರೂ !

ಸಂಚಿಯನಲ್ಲೇ ಅಡಗಿಸಿ ಮಾಧವ
ಮೊದಲಿನ ತಾಣಕೆ ಮರುನಡೆದ
ಕಳ್ಳರಕಳ್ಳ ಮಸ್ತಾನ್ ಬಂದು
ಸಂಚಿಯೊಳಗೆ ಕೈ ತೂರಿಸಿದ.
ಹಣ್ಣುಗಳ ತನ್ನ ಸಂಚಿಗೆ ಹಾಕಿ
ಕಲ್ಲುಗಳ ತುಂಬಿ ಸಂಚಿಯಲಿ,
ಅಲ್ಲೇ ಇರಿಸಿ, ದೂರ ಹೋಗಿತಾ
ಇದ್ದನು ನಡೆವುದ ನೋಡುತಲಿ.
ಓಡಿಬೇಸತ್ತು ಹಿಂದಕೆ ಬಂದು,
" ತಪ್ಪಿದ ಕಳ್ಳ " ಎಂದು,
ಮಾಧವಂಗೆರಡು ಹಣ್ಣು ಕೊಟ್ಟು ಕಳು
ಹಿದ ಕಂಚಪ್ಪಣನಂದು.
ಅಡಗಿದ ಸಂಚಿಯ ನೆತ್ತಿ ಮಾಧವಂ
ದೂರ ಹೋಗಿ ಕಾಯೇ,





## ಮಾಯಾ ಚಕ್ರ (ಹಿಂಬದಿಯ ಚಿತ್ರಕಥೆ-೧)

**ಪೂ**ರ್ವಕಾಲದಲ್ಲಿ ಒಮ್ಮಾನೊಮ್ಮೆ ದೇವತೆಗಳಿಗೂ ರಾಕ್ಷಸರಿಗೂ ನಡುವೆ ದೊಡ್ಡ ಯುದ್ಧವು ಜರುಗಿತು. ಆ ಸಮಯದಲ್ಲಿ ಆಕಸ್ಮಿಕವಾಗಿ ಒಂದು ವಿಚಿತ್ರವಾದ ಚಕ್ರವು ಸ್ವರ್ಗದಿಂದ ಜಾರಿ ಭೂಮಿಗೆ ಬಿತ್ತು. ಅದರೊಂದಿಗೇ ಒಬ್ಬಳು ದೇವತೆಯೂ ಒಬ್ಬಳು ರಾಕ್ಷಸಿಯೂ ಭೂಲೋಕಕ್ಕೆ ಬಿದ್ದು ಕಾದಾಡಲಾರಂಭಿಸಿದರು.

ಇಬ್ಬರೂ ಚಕ್ರ ನನ್ನದು ತನ್ನದು ಎನ್ನುತ್ತಾ ಎಳೆದಾಡಿಕೊಳ್ಳುತ್ತಿದ್ದರು. ರಾಜಭಟರು ಅವರನ್ನು ಆ ದೇಶದ ರಾಜನಬಳಿಗೆ ಕರೆದು ತಂದರು. "ರಾಜಾ, ಇದು ನನ್ನ ಚಕ್ರ. ಈ ರಾಕ್ಷಸಿ ಕದ್ದಳು" ಎಂದಳು ದೇವತೆ. "ಅಲ್ಲಲ್ಲ. ಇದು ನನ್ನದು; ಇವಳು ಕದ್ದಳು" ಎಂದಳು ರಾಕ್ಷಸಿ.

ರಾಜನು ನ್ಯಾಯ ನಿರ್ಣಯ ಮಾಡಲಾಗದೆ ಆ ಚಕ್ರವನ್ನೆತ್ತಿಕೊಂಡು ಪರೀಕ್ಷಿಸಿ ನೋಡಿದನು. ಇಂತಹರದು ಎನ್ನುವಂತಹ ಯಾವ ಗುರುತೂ ಅದರಲ್ಲಿ ಕಾಣಲಿಲ್ಲ. "ಈ ಚಕ್ರದಲ್ಲಿ ಏನಾದರೂ ಮಹಿಮೆ ಇದೆಯೆ?" ಎಂದು ಕೇಳಿದ ರಾಜ. "ಇದೆ, ಇದೆ. ಇದು ಮಹಿಮೆಯ ಚಕ್ರ; ಮಾಯಾಚಕ್ರ" ಎಂದರು ಇಬ್ಬರೂ. "ಎಲ್ಲಿ ಮಹಿಮೆ ತೋರಿಸಿ; ಅದರಿಂದ ಈ ಚಕ್ರ ಯಾರದೋ ನಿರ್ಣಯಿಸುವೆನು" ಎಂದು ರಾಜನು ಮೊದಲು ರಾಕ್ಷಸಿಯ ಕೈಗೆ ಆ ಚಕ್ರವನ್ನು ಕೊಟ್ಟ.

ರಾಕ್ಷಸಿ ಆ ಚಕ್ರವನ್ನು ಹಾಗೆ ಹೀಗೆ ತಿರುಗಿಸಿ ನೋಡಿದಳು. ಏನೇನೋ ಮಾಡಿದಳು. ಯಾವ ಮಹಿಮೆಯೂ ಕಾಣಲಿಲ್ಲ. ಅನಂತರ ರಾಜ ಅದನ್ನು ಅವಳಿಂದ ಪಡೆದು ದೇವತೆಯ ಕೈಗೆ ಕೊಟ್ಟ. ದೇವತೆ ಅದನ್ನು ಭಕ್ತಿಯಿಂದ ಕಣ್ಣಿಗೆ ಒತ್ತಿಕೊಂಡು ರಾಜನು ಕುಳಿತಿದ್ದ ಬೆಳ್ಳಿಯ ಸಿಂಹಾಸನಕ್ಕೆ ತಾಗಿಸಿದಳು.

ಕೂಡಲೇ ಅದು ಬಂಗಾರದ ಸಿಂಹಾಸನವಾಗಿ ಬದಲಾಯಿಸಿತು! ಸಭಿಕರೆಲ್ಲಾ ಆಶ್ಚರ್ಯಪಟ್ಟರು. ರಾಜನು ಬಹಳ ಸಂತೋಷಿಸಿ "ಇದು ನಿನ್ನದೇ ನಿಜ" ಎಂದು ಆ ಮಾಯಾಚಕ್ರವನ್ನು ದೇವತೆಗೇ ಕೊಟ್ಟನು.

ರಾಕ್ಷಸಿ ಸಿಟ್ಟಿನಿಂದ ಉರಿದುಹೋದಳು. "ನನಗೆ ಇದಿರು ನ್ಯಾಯ ಹೇಳಿದವರ ತಲೆ ಕತ್ತೆಯ ತಲೆಯಾಗಲಿ. ಅವರು ನನ್ನ ಕೆಂಪುವನದ ಕೆಂಪು ಕೋಟೆಯಲ್ಲಿ ಸಿಕ್ಕಿಕೊಂಡು ನನ್ನ ಅಡಿಯಾಳಾಗಲಿ!" ಎಂದು ಶಾಪ ಕೊಟ್ಟಳು. ಮತ್ತು ತನ್ನ ಮಂತ್ರದಂಡದಿಂದ ರಾಜನನ್ನು ಮುಟ್ಟಿಬಿಟ್ಟಳು. ತತ್‌ಕ್ಷಣವೇ ರಾಜನ ತಲೆ ಕತ್ತೆ ತಲೆಯಾಯಿತು! ಸಭೆಯೆಲ್ಲಾ ಹಾಹಾಕಾರವೆದ್ದಿತು.

ಅಷ್ಟರಲ್ಲಿ ರಾಕ್ಷಸಿ ಹೊರಟು ಮಾಯವಾಗಿದ್ದಳು. ಆಗ—




# ತಪ್ಪು ಯಾರದು?

ಬಹಳಕಾಲದ ಹಿಂದೆ ಕೌಶಿಕನೆಂಬ ಬ್ರಾಹ್ಮಣೋತ್ತಮನೊಬ್ಬನು ಜೀವಿಸುತ್ತಿದ್ದನು. ಆತನು ಬಹಳ ಧರ್ಮಬುದ್ಧಿಯುಳ್ಳವನು.

ಒಂದುದಿನ ಕೌಶಿಕನು ಪಂಡಿತನೊಬ್ಬನನ್ನು ಊಟಕ್ಕೆ ಆಹ್ವಾನಿಸಿದನು. ಬಳಿಕ ಔತಣಕ್ಕೆ ಬೇಕಾದ ಎಲ್ಲ ಏರ್ಪಾಟುಗಳನ್ನೂ ಮಾಡಿದನು. ವಾಡಿಕೆಯಾಗಿ ಹಾಲು ಮೊಸರು ತರುವಾಕೆಯನ್ನು ಕುರಿತು "ಅಮ್ಮಾ, ನಾಳೆ ನಮ್ಮ ಮನೆಗೆ ಪಂಡಿತರೊಬ್ಬರು ಊಟಕ್ಕೆ ಬರುವವರಿದ್ದಾರೆ. ನೀರು ಬೆರಸದೆ, ಹೆಪ್ಪು ಹಾಕಿದ ಮೊಸರನ್ನು ಹಾಗೇ ತಂದುಕೊಟ್ಟರೆ ಎಂದಿಗಿಂತ ಹೆಚ್ಚು ಹಣ ಕೊಡುತ್ತೇನೆ" ಎಂದ.

ಮರುದಿನ ಬೆಳಗ್ಗೆ ಹಾಲಿನಾಕೆ ಹೆಪ್ಪು ಹಾಕಿದ ಗಟ್ಟಿಮೊಸರಿನ ಮಡಿಕೆಯನ್ನು ಜಾಗರೂಕತೆಯಿಂದ ಬುಟ್ಟಿಯಲ್ಲಿಟ್ಟು, ಮೇಲೊಂದು ಬಟ್ಟೆ ಮುಚ್ಚಿ, ಬ್ರಾಹ್ಮಣನ ಮನೆಕಡೆ ನಡೆದಳು. ಆಕೆ ಗಬಗಬನೆ ನಡೆಯುತ್ತಿರುವ ರಭಸದಲ್ಲಿ ಮೊಸರಿನ ಮಡಿಕೆಯ ಬಟ್ಟೆ ಒಂದುಕಡೆಗೆ ಸರಿದುಹೋಯಿತು.

ಅದೇ ಸಮಯಕ್ಕೆ ಒಂದು ಗರುಡಪಕ್ಷಿ ಒಂದು ಸರ್ಪವನ್ನು ತನ್ನ ಕಾಲುಗಳಿಂದ ಹಿಡಿದುಕೊಂಡು ಗಗನಮಾರ್ಗವಾಗಿ ಹಾರುತಿತ್ತು. ವಿಲವಿಲನೆ ಒದ್ದಾಡುತ್ತಿದ್ದ ಆ ಹಾವು ವಿಷವನ್ನು ಕಾರಿತು. ಆ ವಿಷ ದುರದೃಷ್ಟವಶಾತ್ ಹಾಲಿನವಳ ತಲೆಯಮೇಲಿದ್ದ ಮೊಸರಿನ ಮಡಿಕೆಯಲ್ಲಿ ಬಿತ್ತು.

ಹಾಲಿನಾಕೆ ನೆಟ್ಟಗೆ ಕೌಶಿಕನ ಮನೆಗೆ ಹೋಗಿ, ಮೊಸರಿನ ಮಡಿಕೆಯನ್ನು ಕೊಟ್ಟು ತನ್ನ ಮನೆಗೆ ಹಿಂತಿರುಗಿದಳು. ಕೌಶಿಕನು ಆ ಮಡಿಕೆಯನ್ನು ತೆಗೆದುಕೊಂಡು ಹೋಗಿ ಒಂದುಕಡೆ ಜೋಪಾನವಾಗಿಟ್ಟನು.

ಊಟದ ಸಮಯವಾಯಿತು, ಸಮಯಕ್ಕೆ ಸರಿಯಾಗಿ ಪಂಡಿತೋತ್ತಮನು ಬಂದನು. ಭಕ್ಷಗಳೆಲ್ಲಾ ರುಚಿರುಚಿಯಾಗಿದ್ದುದರಿಂದ

ಜಿ. ವೆಂಕಟಪ್ಪ



ಹೊಟ್ಟೆಯತುಂಬಾ ಊಟಮಾಡಿದ. ಮಡಿಕೆಯಲ್ಲಿ ಹೆಪ್ಪುಹಾಕಿಸಿದ್ದ ಗಟ್ಟಿಮೊಸರನ್ನು ತಂದು ಬ್ರಾಹ್ಮಣನು ಬಡಿಸಿದನು. ಪಂಡಿತನೂ ತೃಪ್ತಿಯಿಂದ ಅದನ್ನುಂಡನು.

ಆದರೆ ಊಟ ಮುಗಿದ ಸ್ವಲ್ಪ ಸಮಯಕ್ಕೆಲ್ಲಾ ಪಂಡಿತನು ವಿಲವಿಲನೆಂದು ಒದ್ದಾಡಿ ಪ್ರಾಣವನ್ನು ತೊರೆದನು. ನಡೆದ ವಿಷಯ ಯಾರಿಗೆತಾನೇ ಗೊತ್ತಾಗುತ್ತದೆ. ಆಕಸ್ಮಿಕವಾಗಿ ಹೀಗೆ ನಡೆಯಿತೆಂದು ಎಣಿಸಿ, ಕೌಶಿಕನು ತುಂಬಾ ಕಳವಳಪಟ್ಟನು.

ಭೂಲೋಕದಲ್ಲಿ ಹೀಗೆ ಪಂಡಿತೋತ್ತಮನು ಮರಣಿಸಿದ ಕೂಡಲೇ ನರಕಲೋಕದಲ್ಲಿ ಲೆಕ್ಕಬರೆಯುವ ಚಿತ್ರಗುಪ್ತನಿಗೆ ಬಿಕ್ಕಟ್ಟು ಬಂತು. ಪಂಡಿತನನ್ನು ಸಾಯಿಸಿದ ಪಾಪ ಯಾರಿಗೆ ಸಲ್ಲುವುದು? ಆತನು ಸಂದಿಗ್ಧಾವಸ್ಥೆಯಲ್ಲಿ ಸಿಲುಕಿಕೊಂಡನು.

"ಪಂಡಿತನಿಗೆ ಭೋಜನವಿಟ್ಟಾತ ಬ್ರಾಹ್ಮಣ. ಆದುದರಿಂದ ಈ ಪಾಪ ಆತನಿಗೇ ಸಲ್ಲುವುದು" ಎಂದುಕೊಂಡ. ಆದರೆ ಮರುಕ್ಷಣವೇ ಈ ಅಭಿಪ್ರಾಯ ಬದಲಾಯಿಸಿದ. "ಒಳ್ಳೇ ಗಟ್ಟಿಮೊಸರನ್ನು ತರಿಸಿ ಪಂಡಿತನಿಗೆ ತೃಪ್ತಿಯುಂಟಾಗುವಂತೆ ಉಪಚಾರಮಾಡುತ್ತಿರುವೆನೆಂಬ ಭಾವನೆಯಿಂದ ಬಡಿಸಿದನೇ ಹೊರತು ಮೊಸರಿನ ಮಡಿಕೆಯಲ್ಲಿ ಸರ್ಪವು ವಿಷಕಕ್ಕಿರುವ ಸಂಗತಿ ಆತನಿಗೇನುಗೊತ್ತು? ತಿಳಿದಿದ್ದರೆ ಖಂಡಿತ ಬಡಿಸುತ್ತಿರಲ್ಲಿಲ್ಲ. ಬ್ರಾಹ್ಮಣನು ನಿರ್ದೋಷಿ" ಎಂದು ತರ್ಕಿಸಿದನು.

"ಇಲ್ಲ, ಮೊಸರು ತಂದ ಹಾಲಿನಾಕೆಯದು ತಪ್ಪೇ? ಊಹೂಂ. ಸರ್ಪವು ವಿಷಕಕ್ಕಿರುವುದೆಂದು ಆಕೆಗೆ ತಿಳಿಯದು. ಆದುದರಿಂದ ಹಾಲಿನಾಕೆ ಪಾಪಮಾಡಿಲ್ಲ" ಎಂದು ನಿರ್ಧರಿಸಿದ.

"ಮಡಿಕೆಯ ಮೇಲಿದ್ದ ಬಟ್ಟೆ ಸರಿದು ಹೋಗಿರದಿದ್ದರೆ ಹಾವುಕಕ್ಕಿದ ವಿಷ ಮೊಸರಿನಲ್ಲಿ ಬೆರೆಯುವುದೂ, ಪಂಡಿತೋತ್ತಮನು ಈ ರೀತಿ ಸಾಯುವುದೂ ಸಂಭವಿಸುತ್ತಿರಲಿಲ್ಲ. ಆದುದರಿಂದ ಬಟ್ಟೆಯನ್ನು ಬದಿಗೆ ಸರಿಸಿದ ವಾಯುದೇವನದೇ ಅಲ್ಲವೇ ತಪ್ಪು?" ಎಂದು ಮತ್ತೆ ಯೋಚಿಸಿದ.

"ಅಲ್ಲ, ಗಾಳಿಬೀಸದಿದ್ದರೆ ಪ್ರಾಣಿಕೋಟಿ ಹೇಗೆ ಬದುಕುವುದು? ವಾಯುದೇವನಿಗೆ



ಅದೇ ಕರ್ತವ್ಯ. ಅದು ಆತನ ಸಹಜಗುಣ. ವಾಯುದೇವನ ತಪ್ಪು ಇದರಲ್ಲಿ ತಿಲಾಂಶ ವಾದರೂ ಇಲ್ಲ." ಎಂದು ಚಿತ್ರಗುಪ್ತನು ತೀರ್ಮಾನಿಸಿಕೊಂಡ.

ಸರಿ, ವಿಷಕಕ್ಕಿದ ಹಾವಿಗೆ ಸೇರಿದುದೇ ಈ ಪಾಪ. ಅದೂ ಸಹಜವಾಗಿ ತೋರಲಿಲ್ಲ. ಗರುಡಪಕ್ಷಿ ತನ್ನನ್ನು ಉಗುರಿನಿಂದ ಅದುಮಿ ಹಿಡಿಯಲು ಬಾಧೆ ತಾಳಲಾರದೆ ಪ್ರಾಣ ಹೋಗುವ ಸಮಯದಲ್ಲಿ ಅದು ವಿಷವನ್ನು ಕಕ್ಕಿತು. ಆ ವಿಷ ಇಂತಹದೇ ನಿರ್ದಿಷ್ಟವಾದ ಸ್ಥಳದಲ್ಲಿ ಬೀಳುವುದೆಂದು ಅದಕ್ಕೆ ಹೇಗೆ ಗೊತ್ತಾಗಬೇಕು? ವಿಷ ಸರಿಯಾಗಿ ಮೊಸರಿದ್ದ ಮಡಿಕೆಯಲ್ಲಿ ಬೀಳುವುದೆಂದು ಅದೇ ನಾದರೂ ಕನಸು ಕಂಡಿತ್ತೇ?"

ಇನ್ನು ಉಳಿದುದೆಲ್ಲಾ ಗರುಡಪಕ್ಷಿ. ಅದರ ಆಹಾರಕ್ಕಾಗಿ ಅದು ತಾಪತ್ರಯಪಟ್ಟು ಸರ್ಪವನ್ನು ಹಿಡಿಯಿತೇ ಹೊರತು ಮಿಕ್ಕ ಗೊಡವೆಯೆಲ್ಲಾ ಅದಕ್ಕೇನು ಗೊತ್ತು? ಆದುದರಿಂದ ಗರುಡಪಕ್ಷಿ ನಿರಪರಾಧಿ.

ಈ ವಿಷಯವನ್ನು ನಿರ್ಧರಿಸಲಾರದೆ ಚಿತ್ರಗುಪ್ತನು ಯಮಧರ್ಮರಾಜನ ಹತ್ತಿರಕ್ಕೆ ಹೋಗಿ ಸಲಹೆ ಕೊಡುವಂತೆ ಬೇಡಿಕೊಂಡ. ಯಮಧರ್ಮನಿಗೂ ಏನೂ ತೋರಲಿಲ್ಲ.

ಯಮನು ನೆಟ್ಟಗೆ ವಿಷ್ಣುವಿನ ಹತ್ತಿರಕ್ಕೆ ಹೋಗಿ ವಿಷಯವನ್ನೆಲ್ಲಾ ನಿವೇದಿಸಿ ಕೊಂಡನು. ವಿಷ್ಣುವಿಗೂ ತಕ್ಷಣ ಏನೂ ಹೊಳೆಯಲಿಲ್ಲ. ಸಭೆಕೂಡಿಸಿದ. ಯಾರೂ




ಧರ್ಮವನ್ನು ನಿರ್ಣಯಿಸದಾದರು. ಆಗ ವಿಷ್ಣು ಯಮನೊಂದಿಗೆ "ಇದು ಹೀಗೆ ನಿರ್ಧಾರವಾಗುವ ವಿಷಯವಲ್ಲ. ನಾನು ಮತ್ತೆ ಹೇಳುವವರೆವಿಗೆ ಈ ಪಾಪಕ್ಕೆ ಹೊಣೆ ಯಾರೆಂದು ನೀನು ಬರೆಯಬೇಡ" ಎಂದು ಹೇಳಿ ಕಳುಹಿಸಿದ.

ಹೀಗೆ ಹೇಳಿದ ವಿಷ್ಣು ತನ್ನ ಭಟರನ್ನು ಭೂಲೋಕಕ್ಕೆ ಕಳುಹಿಸಿದ. ಒಂದು ದಿನ ಇಬ್ಬರು ಬ್ರಾಹ್ಮಣರು ಒಂದು ಮರದ ಕೆಳಗೆ ವಿಶ್ರಾಂತಿ ಪಡೆಯುತ್ತಿದ್ದರು. ಅವರಲ್ಲಿ ಒಬ್ಬನಿಗೆ ಪಕ್ಷಿಗಳ ಭಾಷೆ ಗೊತ್ತಿತ್ತು. ಆ ಮರದ ಮೇಲಿದ್ದ ಪಕ್ಷಿದಂಪತಿಗಳು ಆ ದಿನ ತಾವು ಗರುಡನಿಂದ ಕೇಳಿದ ವಿಷಯ, ಕೌಶಿಕನು ಪಂಡಿತನಿಗೆ ಭೋಜನವಿಟ್ಟ ಸಂಗತಿ, ಪಂಡಿ



ತನು ಸತ್ತ ಸುದ್ದಿ, ಇದನ್ನು ಕುರಿತು ಯಮ ಧರ್ಮರಾಜನು ಕಕ್ಕಬಿಕ್ಕಿಯಾದ ವಿಚಾರ ಕುರಿತು ಮಾತನಾಡಿಕೊಳ್ಳುತ್ತಿದ್ದವು. ಇದನ್ನು ಕೇಳುತ್ತಿದ್ದ ಆ ಬ್ರಾಹ್ಮಣ ವಿಷಯವನ್ನೆಲ್ಲಾ ತನ್ನ ಸಂಗಡಿಗನೊಂದಿಗೆ ಹೇಳಿ "ಇದೊಂದು ಮಹಾ ಕ್ಲಿಷ್ಟವಾದ ಸಮಸ್ಯೆಯೇ? ನನ್ನನ್ನು ಕೇಳಿದ್ದರೆ ನಾನು ಹೇಳುತಿದ್ದೆ. ಪದಾರ್ಥವನ್ನು ಪರೀಕ್ಷೆಮಾಡದೆ ಅತಿಥಿಗೆ ಬಡಿಸಿದುದು ರಿಂದಲೇ ಪಂಡಿತನು ಮರಣಿಸಿದ! ಕೌಶಿಕನೇ ಈ ಪಾಪಕ್ಕೆ ಹೊಣೆ" ಎಂದ.

ಆ ಸಮಯದಲ್ಲಿ ಭೂಲೋಕಕ್ಕೆ ಇಳಿದು ಬರುತ್ತಿದ್ದ ಯಮಕಿಂಕರರು ಈ ಮಾತು ಗಳನ್ನು ಆಲಿಸಿ, ರಿವ್ವನೆ ಅಲ್ಲಿಗೆ ಬಂದು, ಪಕ್ಷಿ ಭಾಷೆಬಲ್ಲಾತನನ್ನು ಯಮಧರ್ಮ ರಾಜ ನಲ್ಲಿಗೆ ಎಳೆದುಕೊಂಡು ಹೋದರು. ಯಮ ಧರ್ಮ ರಾಜನು ಆ ಬ್ರಾಹ್ಮಣನನ್ನು ಕುರಿತು "ಈ ಮಾತುಗಳನ್ನು ನೀನು ಹೇಳಿದು ದುಂಟೋ" ಎಂದು ಕೇಳಿದ. "ಹೌದು ಹೇಳಿದೆ" ಎಂದ ಬ್ರಾಹ್ಮಣ ನಿರ್ಭಯನಾಗಿ.

ಆಗ ಯಮನು ಎರಡು ಮಡಿಕೆ ಮೊಸರು ತರಿಸಿದ. ರಹಸ್ಯವಾಗಿ ಅದರಲ್ಲೊಂದರಲ್ಲಿ ವಿಷಬೆರೆಸಿ, ಬ್ರಾಹ್ಮಣನ ಮುಂದೆ ಇಟ್ಟು "ಅಯ್ಯಾ, ಬ್ರಾಹ್ಮಣನೇ, ಈ ಎರಡು ಮಡಿಕೆ ಗಳಲ್ಲಿ ಯಾವುದರಲ್ಲಿ ವಿಷ ಬೆರೆಸಿದೆಯೋ ಹೇಳು" ಎಂದ. ಬ್ರಾಹ್ಮಣ ದಿಗ್ಭ್ರಾಂತ ನಾದ. ವಿಷವಿರುವ ಮಡಿಕೆಯನ್ನು ತಿಳಿಯಲು ತಾನು ಮೊದಲು ರುಚಿನೋಡಿ ಪರೀಕ್ಷಿಸ ಬೇಕು. ಒಂದುವೇಳೆ ಅದೇ ವಿಷಬೆರಸಿದ ಮಡಿಕೆಯಾದರೆ ತಾನು ಮರಣಿಸುತ್ತಾನೆ. ಅಂತಹ ಸ್ಥಿತಿ ಯೊದಗಿಬಂತು. ಆತನು ಮತ್ತೇನೂ ಮಾಡಲಾರ. ತಲೆತಗ್ಗಿಸಿಕೊಂಡು ನಿಂತುಬಿಟ್ಟ. ಆಗ ಯಮಧರ್ಮರಾಜನು ಕುಪಿತನಾಗಿ "ವಿಪ್ರನೇ, ನಿನಗೆ ತಿಳಿಯದಿರು ವಾಗ ಸುಮ್ಮನಿರದೆ, ಪರರಮೇಲೆ ನಿಂದೆ ಯನ್ನು ಆರೋಪಿಸಿದೆ. ಆದುದರಿಂದ ಪಂಡಿತ ನನ್ನು ಕೊಂದ ಪಾಪ ನಿನಗೇ ಸಲ್ಲುವುದು" ಎಂದು ಹೇಳಿ, ಆತನ ಹೆಸರನ್ನು ಲೆಕ್ಕದಲ್ಲಿ ಬರೆಯುವಂತೆ ಚಿತ್ರಗುಪ್ತನಿಗೆ ಹೇಳಿದ.






## 10

[ ಚತುರ್ನೇತ್ರನು ತನಗೂ ಏಕಾಕ್ಷಿಗೂ ಇರುವ ಬಾಲ್ಯವಿರೋಧದ ವೃತ್ತಾಂತವನ್ನು ಸಮರಸೇನನಿಗೆ ತಿಳಿಸಿದನಷ್ಟೆ? ಇಬ್ಬರೂ ಒಂದೇ ಊರಿನವರೆಂದೂ, ಜಿಂಕೆಮರಿಯಿಂದ ಹುಟ್ಟಿದ ಕಲಹದಿಂದ ಇಬ್ಬರೂ ಬಡೆದಾಡಿಕೊಂಡರೆಂದೂ ಹೇಳಿದನು. ಕಡೆಗೆ ಅವನನ್ನು ಕಂಡು ಎಲ್ಲರೂ ಓಡಿಹೋದಮೇಲೆ ಕೋಲಾಹಲವು ಕೇಳಿಸಿತು. ಆಮೇಲೆ—]

ಚತುರ್ನೇತ್ರನು ತನ್ನಮೇಲೆ ಪ್ರಯೋಗಿಸಿದ ಕುಟಿಲೋಪಾಯವನ್ನು ಕುರಿತು ಹೇಳುತ್ತಿರುವಷ್ಟರಲ್ಲಿ ಬೆಟ್ಟದ ತಪ್ಪಲಲ್ಲಿ ಭಾರಿ ಕೋಲಾಹಲವೆದ್ದಿತು. ಸಮರಸೇನನೂ ಆತನ ಸೈನಿಕರೂ ಆ ಕಡೆಗೆ ತಿರುಗಿ ನೋಡಿದರು.

ಆಗ ಹೊತ್ತುಮುಳುಗಿ ಕೊಂಚ ಸಮಯಮಾತ್ರವೇ ಆಗಿತ್ತು. ಆ ಪರ್ವತ ಪ್ರದೇಶವನೆಲ್ಲಾ ಕತ್ತಲಾವರಿಸುತಿತ್ತು. ಸಮರಸೇನನಿಗೆ ದೂರದಲ್ಲಿ ಯಾರೋ ಮನುಷ್ಯರ ಅರಚಾಟ ಕೇಳಿಬರುತಿತ್ತೇ ವಿನಹ ಅವರಿರುವ ಸ್ಥಳವಾಗಲೀ, ಸಾಗುತ್ತಿರುವ ಮಾರ್ಗವಾಗಲೀ ತಿಳಿಯಲಿಲ್ಲ. ಅಷ್ಟರಲ್ಲಿ ಏಕಾಕ್ಷಿ ಮಾಂತ್ರಿಕನ ಗಡಸು ಧ್ವನಿ ಕೇಳಿಸಿತು. "ಕಾಲಭುಜಂಗಾ, ಕಪಾಲಾ" ಎಂದು ಕೂಗುತ್ತಿದ್ದಾನೆ ಏಕಾಕ್ಷಿ.

ಚತುರ್ನೇತ್ರನು ಒಂದು ಕ್ಷಣಮಾತ್ರ ಅತ್ತ ಕಡೆ ದೃಷ್ಟಿಹಾಯಿಸಿ "ಸಮರಸೇನನೇ, ಒಂದು ಕಡೆಯಿಂದ ನಿಮ್ಮ ಕುಂಡಲಿನೀ ನಿವಾಸಿಗಳೂ, ಮತ್ತೊಂದುಕಡೆಯಿಂದ ಏಕಾಕ್ಷಿಯೂ ಬರುತ್ತಿರುವರು. ಹಡಗು ಮತ್ತು ನಾಗಕನ್ಯೆಯರ ಕಥೆ ತರುವಾಯ ಹೇಳುವೆನು.



ಸುತ್ತಾ ಬೆಟ್ಟವನ್ನು ಹತ್ತುತ್ತಿದ್ದಾರೆ. "ಚತುರ್ನೇತ್ರನೇ ಈಗ ನಮ್ಮ ಕರ್ತವ್ಯವೇನು?" ಎಂದು ದುಗುಡದಿಂದ ಕೇಳಿದ ಸಮರಸೇನನು ಹೀಗೆ ಮುಂದುವರಿಸಿದ: "ಕುಂಭಾಂಡನೊಬ್ಬನೇ ಆಗಿದ್ದರೆ ನನ್ನ ಈ ಐದು ಜನ ಸೈನಿಕರೊಂದಿಗೆ ಮೇಲೆ ಬೀಳುತ್ತಿದ್ದೆ. ನನ್ನ ಸೈನಿಕರ ಬಾಣಗಳಿಗೆ ಆ ಕಾಡುಜನ ನಿಲ್ಲಲಾರರು. ಆದರೆ ಈ ಹಾಳು ಏಕಾಕ್ಷಿ..."

"ಅರೆ, ಏಕಾಕ್ಷಿಯ ಸಂಗತಿ ನನಗೆಬಿಡು. ಆದರೆ ಒಂದು ಮಾತ್ರ ಜ್ಞಾಪಕದಲ್ಲಿಟ್ಟುಕೊ. ನೀನೀಗಲೇ ಈ ಕತ್ತಲೆಯಲ್ಲಿ ಕುಂಭಾಂಡನನ್ನು ಎದುರಿಸುವುದು ಶ್ರೇಯಸ್ಕರವಾಗಿ ನನಗೆ ತೋರುತ್ತಿಲ್ಲ. ಅವನು ಒಂದುವೇಳೆ ಏಕಾಕ್ಷಿಯ ಕಣ್ಣಿಗೆ ಬಿದ್ದರೆ ನೀನು ಮಾಡಬೇಕೆಂದಿರುವ ಕೆಲಸವನ್ನು ಅವನೇ ಮಾಡಿಬಿಡುತ್ತಾನೆ" ಎಂದ ಚತುರ್ನೇತ್ರ.

ಚತುರ್ನೇತ್ರನ ಊಹೆ ನಿಜವಾಗಲು ಬಹಳಸಮಯ ಹಿಡಿಯಲಿಲ್ಲ. ಉತ್ಸಾಹದಿಂದ ಅಬ್ಬರಿಸುತ್ತಾ ಬರುತ್ತಿದ್ದ ಕಾಡು ಜನರನ್ನೂ, ಅವರ ಮುಂದಾಳಾಗಿದ್ದ ಕುಂಭಾಂಡನನ್ನೂ ಏಕಾಕ್ಷಿ ಎದುರುಗೊಂಡು ಅಡ್ಡಗಟ್ಟಿದ.

"ಭಲೆ, ಭಲೆ. ಈ ಸಮಯಕ್ಕಾಗಿಯೇ ನಾನು ಎದುರು ನೋಡುತ್ತಿದ್ದೆ" ಎಂದು ಉದ್ಗಾರತೆಗೆದ ಸಮರಸೇನ. ಆತನ ಕಣ್ಣುಗಳು ಆನಂದದಿಂದ ಕುಣಿಯುತ್ತಿದ್ದವು. ಆದರೆ ಚತುರ್ನೇತ್ರನು ತಲೆಯಾಡಿಸುತ್ತಾ, "ಸಮರಸೇನನೇ, ಅವಸರ ಪಡಬೇಡ.

ಈಗ ಅವರ ಕಣ್ಣಿಗೆಬೀಳದೆ ತಪ್ಪಿಸಿಕೊಳ್ಳುವುದೇ ಕ್ಷೇಮಕರವೆಂದು ಕಾಣುತ್ತದೆ" ಎಂದ. ಸಮರಸೇನನಿಗೂ ಸಹ ಆ ಪರಿಸ್ಥಿತಿಯಲ್ಲಿ ಮತ್ತೆ ಬೇರೆ ಯಾವಮಾರ್ಗವೂ ಇಲ್ಲವೆಂದು ತೋರಿತು. ಕುಂಡಲಿನೀ ಸಿಪಾಯಿಗಳಿಂದ ಕೂಡಲೇ ಆತನಿಗೆ ರಾಜದ್ರೋಹಿ ಕುಂಭಾಂಡನ ಜ್ಞಾಪಕ ಬಂತು.

"ಅದೋ ಅವರು ಈ ಕಡೆಯೇ ಬರುತ್ತಿದ್ದಾರೆ. ಬೆಟ್ಟವನ್ನು ಹತ್ತುತ್ತಿದ್ದಾರೆ" ಎಂದು ಚತುರ್ನೇತ್ರನು ಬೆಟ್ಟದಡಿಯಿರುವ ಸ್ಥಳವನ್ನು ತೋರಿಸಿದ. ಸಮರಸೇನನೂ ಆತನ ಅನುಚರರೂ ಅತ್ತಕಡೆ ನೋಡಿದರು. ಸುಮಾರು ನಲವತ್ತು ಐವತ್ತು ಮಂದಿ ಹಿಲಾಲುಗಳನ್ನು ಹಿಡಿದುಕೊಂಡು ಅಬ್ಬರಿ

ಧನರಾಶಿ ಇರುವ ಹಡಗು, ನಾಗಕನ್ಯೆಯ ವೃತ್ತಾಂತ ನಿನಗೆ ಸರಿಯಾಗಿ ತಿಳಿಯದು. ಅವುಗಳನ್ನು ಕುರಿತ ನಿಗೂಢ ರಹಸ್ಯ ನಿನಗೆ ಈಗಲೇ ಹೇಳಲಾರೆ. ಏಕಾಕ್ಷಿ ಜಂಭಗಾರನೇ ಆದರೂ ಬುದ್ಧಿಹೀನನು ಮಾತ್ರವಲ್ಲವೆಂಬ ಅಂಶವನ್ನು ನೀನು ತಿಳಿಯಬೇಕು. ಈಗ ಆತನಿಗೂ ಕುಂಭಾಂಡನಿಗೂ ನಡೆಯುವ ಸಂಭಾಷಣೆ ಕೇಳಿ ತಿಳಿದುಕೊಳ್ಳುವುದು ಅಗತ್ಯ. ಇತ್ತ ಬಾ, ಅಲ್ಲಿ ಕಾಣಬರುತ್ತಿರುವ ಭಾರಿ ಬಂಡೆಯ ಹಿಂದೆ ಹೋಗಿ ಬಚ್ಚಿಟ್ಟು ಕೊಳ್ಳೋಣ ನಡೆ" ಎಂದ.

ಕತ್ತಲೆಯಲ್ಲಿ ತಡವರಿಸುತ್ತಾ ಸಮರ ಸೇನನೂ, ಸೈನಿಕರೂ ಚತುರ್ನೇತ್ರನನ್ನು ಹಿಂಬಾಲಿಸಿದರು. ಕೆಲವು ಕ್ಷಣಗಳಲ್ಲಿ ಅವರೆಲ್ಲಾ ಕುಂಭಾಂಡನೂ, ಕಾಡು ಜನರೂ ಇರುವ ಸ್ಥಳಕ್ಕೆ ತೀರಾ ಸಮೀಪದಲ್ಲೇ ಇದ್ದ ಒಂದು ಬಂಡೆಯ ಹಿಂದೆ ಬಚ್ಚಿಟ್ಟುಕೊಂಡರು.

ಏಕಾಕ್ಷಿಯನ್ನು ಕಂಡಾಕ್ಷಣ ಕುಂಭಾಂಡನೂ ಭಯದಿಂದ ನಡುಗಿದ. ಆತನ ಹಿಂದೆ ಬರುತ್ತಿದ್ದ ಕಾಡುಜನರು ಪರಾರಿಯಾಗಲು ಪ್ರಯತ್ನ ಮಾಡುತ್ತಿದ್ದರು. ಆಗ ಏಕಾಕ್ಷಿ ಪಕಪಕನೆ ನಗುತ್ತಾ, "ಇರುವಲ್ಲಿಂದ ಯಾರಾದರೂ ಕದಲಿದರೆ ಮರಣಸಿದ್ಧ. ನನ್ನ ದೃಷ್ಟಿಗೆ ಬಿದ್ದ ಪ್ರಾಣಿಯಾಗಲೀ, ನರನಾಗಲೀ, ನನ್ನ ಆಜ್ಞೆಯಿಲ್ಲದೆ ಕದಲಲೂ ಸಹ ಅವಕಾಶವಿಲ್ಲ. ಎಲೈ ಕಾಲಭುಜಂಗಾ, ಕಸಾಲಾ, ಇವರನ್ನು ಸುತ್ತುವರೆಯಿರಿ" ಎಂದು ಆಜ್ಞಾಪಿಸಿದ. ಆ ಕೂಡಲೇ ಕಾಲಭುಜಂಗನು ಮುಂದಕ್ಕೆ






ನುಗ್ಗಿ, ಬುಸುಗುಟ್ಟುತ್ತಾ ಆ ಕಾಡುಜನರ ಸುತ್ತಲೂ ಹರಿದಾಡಲು ಪ್ರಾರಂಭಿಸಿತು. ಕಪಾಲಾ ಅವರೆಲ್ಲರ ತಲೆಗಳಮೇಲೆ ಗಾಳಿಯಲ್ಲಿ ಆಟವಾಡುತಲಿತ್ತು.

"ನೀವು ಯಾರು? ಎತ್ತ ಪ್ರಯಾಣ?" ಎಂದು ಭೀಕರಸ್ವರದಲ್ಲಿ ಕೇಳಿದ ಏಕಾಕ್ಷಿ.

ಈ ಪ್ರಶ್ನೆ ಕೇಳಿ ಕುಂಭಾಂಡನು ತತ್ತರಿಸಿದ. ನಿಜ ನುಡಿಯಬೇಕೋ, ಇಲ್ಲ ಸುಳ್ಳು ಹೇಳಬೇಕೋ ತಿಳಿಯಲಿಲ್ಲ. ಆ ದ್ವೀಪದಲ್ಲಿದ್ದ ಮಾಂತ್ರಿಕರನ್ನು ಕುರಿತು ಕಾಡು ಜನರಿಂದ ಈ ಮೊದಲೇ ಕೆಲವು ವಿಷಯಗಳನ್ನು ಕೇಳಿದ್ದ. ಆದರೆ ಅವರನ್ನು ಮುಖಾಮುಖಿಯಾಗಿ ನೋಡುತ್ತಿರುವುದು ಅದೇ ಮೊದಲು.

"ನಾನು ಈ ಕಾಡುಜನರ ರಾಜ. ನನ್ನ ಹೆಸರು ಕುಂಭಾಂಡ" ಎಂದು ಬಹು ಪ್ರಯಾಸದಿಂದ ನುಡಿದ ಕುಂಭಾಂಡ.

"ಹೀಗೆ ಎಲ್ಲಿಗೆ ಹೊರಟಿರುವಿರಿ?" ಕಣ್ಣು ಕೆಂಪಗೆ ಮಾಡಿ ಕೇಳಿದ ಏಕಾಕ್ಷಿ.

ಇನ್ನು ನಿಜಹೇಳದೆ ಉಳಿಗಾಲವಿಲ್ಲವೆಂದು ತೋರಿತು ಕುಂಭಾಂಡನಿಗೆ. ಒಂದುವೇಳೆ ತಾನು ನಿಜವನ್ನು ಮರೆಮಾಡಿದರೂ, ಭಯದಿಂದ ತಲ್ಲಣಿಸುತ್ತಿದ್ದ ಆ ಕಾಡುಜನ ಸತ್ಯ ನುಡಿದೇ ಬಿಡುವರೆಂದು ಯೋಚಿಸಿ ಕುಂಭಾಂಡನು ಹೀಗೆಂದ:

"ಈ ಬೆಟ್ಟದ ಶಿಖರದಿಂದ ಸಮುದ್ರದ ಕಡೆ ನೋಡಿದರೆ ಸಮುದ್ರದಲ್ಲಿ ಒಂದು ಹಡಗು ಕಾಣಿಸುವುದೆಂದು ಕೇಳಿರುವೆನು. ಅದನ್ನು ನೋಡಲು ಹೋಗುತ್ತಿದ್ದೇವೆ" ಎಂದು ನುಡಿದ. ಏಕಾಕ್ಷಿ ಗಹಗಹಿಸಿ ನಕ್ಕನು.

"ಓ, ಓಹೋ. ಈ ಕತ್ತಲಲ್ಲಿ ಕೇವಲ ಹಡಗನ್ನು ನೋಡಲು ಹತ್ತುತ್ತಿರುವೆಯಾ, ಪಾಪ, ಪ್ರಚಂಡ ಬುದ್ಧಿಯಪ್ಪಾ ನಿನ್ನದು. ನೀನು ಈ ಕಾಡುಜನರ ರಾಜನಾಗುವುದಕ್ಕಿಂತಲೂ ದೇವತೆಗಳ ಒಡೆಯನಾಗಬೇಕಿತ್ತು. ನಿಜ ನುಡಿ. ನೀನು ಆ ನಾವೆಯುಲ್ಲಿರುವ ಧನರಾಶಿಯನ್ನು ಪಡೆಯಲೋಸುಗವಲ್ಲವೇ ಈಗ ಹೊರಟಿರುವುದು?" ಎಂದು ದಬಾಯಿಸಿದ.

ಕುಂಭಾಂಡನು ಕಕ್ಕಾಬಿಕ್ಕಿಯಾಗಿ ಏನೂ ಹೇಳದೆ ಸ್ವಲ್ಪಹೊತ್ತು ಸುಮ್ಮನಿದ್ದುಬಿಟ್ಟ. "ನಿಜವೋ ಸುಳ್ಳೋ ಹೇಳು" ಎಂದು ಗದರಿಸಿದ ಏಕಾಕ್ಷಿ. ಕುಂಭಾಂಡನು ತಬ್ಬಿಬ್ಬಾಗಿ

"ಹೌದು" ಎಂದ. ಆಗ ಏಕಾಕ್ಷಿ ಶಾಂತನಾಗಿ ಹೀಗೆಂದ: "ಈ ದ್ವೀಪದಲ್ಲಿ ಅನೇಕ ದಿನಗಳ ಹಿಂದೆ ಐವಾರು ಜನರನ್ನು ಕಂಡೆ. ನೀನು ಹಾಕಿಕೊಂಡಿರುವಂತಹ ಉಡುಪನ್ನು ಧರಿಸಿದ್ದರು. ಅವರೂ ಸಹ, ಬಹುಶಃ ಆ ನಾವೆಯಲ್ಲಿರುವ ಧನರಾಶಿ ಪಡೆಯಲೇ ಬಂದಿರುವಂತಿದೆ. ನೀನೂ ಆ ಗುಂಪಿನವನೇ?"

ಆಗ ಕುಂಭಾಂಡನಿಗೆ ಏಕಾಕ್ಷಿ ಹೇಳಿದ ಜನರು ಯಾರೋ ಅರ್ಥವಾಯಿತು. ತನಗಿಂತಲೂ ಮೊದಲು ಕುಂಡಲಿನೀ ರಾಜ್ಯದಿಂದ ಹೊರಟ ಸಮರಸೇನ ಮತ್ತು ಆತನ ಸೈನಿಕರೆಂದು ಸುಲಭವಾಗಿ ಗ್ರಹಿಸಿದ. ಆ ಭಾವನೆ ಬಂದಕೂಡಲೇ ಆತನಿಗೆ ಭಯ ಮತ್ತು ಕ್ರೋಧಗಳು ಒಮ್ಮೆಗೇ ಉಂಟಾದವು. ಅವರನ್ನು ಕೊಂದಹೊರತು ತನಗೆ ಉಳಿಗಾಲವಿಲ್ಲವೆಂದು ಭಾವಿಸಿದ.

"ಅವರು ಯಾರೆಂಬುದು ನನಗೆ ತಿಳಿದಿದೆ" ಎಂದು ಹಲ್ಲು ಕಡಿಯುತ್ತಾ, ಕುಂಭಾಂಡನು ಹೀಗೆ ಮುಂದುವರಿಸಿದ "ಅವರು ಈ ದ್ವೀಪವನ್ನು ಸೇರಿದರೆಂಬ ವಿಷಯವನ್ನು ಅರಿತು, ಅವರನ್ನು ಹತಮಾಡಲು ನಾನಿಲ್ಲಿಗೆ ಬಂದೆ. ಧನಾಶಾಪರರಾದ ಆ ದ್ರೋಹಿಗಳು ಆ ಹಡಗಿಗಾಗಿ ಹುಡುಕುತ್ತಿರಬಹುದೆಂದು ನಾನು ಇತ್ತಕಡೆ ಬಂದೆ. ದಾರಿಯಲ್ಲಿ ನೀವು ಎದುರಾದಿರಿ. ಇದು ನಡೆದ ಸಂಗತಿ" ಎಂದು ಕುಂಭಾಂಡ ಹೇಳಿದ, ನಿಜವನ್ನು ಮರೆಮಾಚಿ. ಈ ಸಂಭಾಷಣೆಯನ್ನು ಅದುವರೆವಿಗೂ



ಕೇಳುತ್ತಾ ನಿಂತಿದ್ದ ಚತುರ್ನೇತ್ರನು ಇದೇ ಯೋಗ್ಯವಾದ ಸಮಯವೆಂದು ಗ್ರಹಿಸಿ ಅವಿತಿಟ್ಟುಕೊಂಡ ಜಾಗದಿಂದ "ಉಲೂಕಾ, ನರವಾನರಾ" ಎಂದು ತನ್ನ ಅನುಚರರನ್ನು ಕೂಗಿ ಕರೆದ. ಸಮರಸೇನನೂ ಆತನ ಸೈನಿಕರೂ, ಕುಂಭಾಂಡನ ಮತ್ತು ಕಾಡುಜನರ ಮೇಲೆ ಶರವರ್ಷ ಸುರಿಸಿದರು.

'ಉಲೂಕಾ' ಎಂಬ ಹೆಸರು ಕೇಳಿದ ಕೂಡಲೇ ಏಕಾಕ್ಷಿ ತನ್ನ ಸುತ್ತಲೂ ದೃಷ್ಟಿ ಬೀರಿದ. ಬಾಣಗಳು ತಾಕಿದ ಕೆಲವು ಜನ ಕಾಡುಜನರು ಕಿರಾರನೆ ಕಿರಿಚುತ್ತಾ ಕುಸಿದು ಬಿದ್ದರು. ಕುಂಭಾಂಡನು ಇದ್ದ ಸ್ಥಳದಿಂದ ಒಂದು ನೆಗೆತ ನೆಗೆದು ಬೆಟ್ಟದ ತಪ್ಪಲಿಗೆ ಸೇರಿಕೊಳ್ಳಲು ಓಡಲು ಪ್ರಾರಂಭಿಸಿದನು.



ಹಾಗೆ ಪ್ರಾಣಭೀತಿಯಿಂದ ಪರಾರಿಯಾಗು ತಿದ್ದ ಕಾಡುಜನರನ್ನೂ, ಕುಂಭಾಂಡನನ್ನೂ ನೋಡಿ ಸಮರಸೇನನೂ ಆತನ ಸೈನಿಕರೂ ಉತ್ಸಾಹದಿಂದ ಹಿಂಬಾಲಿಸಿದರು. ಕತ್ತಲೆ ಯಾದುದರಿಂದ ಗುರಿಯಿಟ್ಟು ಬಾಣಬಿಡಲು ಸೈನಿಕರಿಗೆ ಸಾಧ್ಯವಾಗುತ್ತಿರಲಿಲ್ಲ. "ನಿಲ್ಲಿ, ನಿಲ್ಲಿ" ಎಂದು ಕಾಡುಜನರನ್ನು ನಿಲ್ಲಿಸಲು ಕುಂಭಾಂಡನು ಪ್ರಯತ್ನ ಪಡುತ್ತಿದ್ದ.

ಉಲೂಕನ ಹೆಸರು ಕೇಳಿ ಅದುರಿಬಿದ್ದ ಏಕಾಕ್ಷಿ ಸ್ವಲ್ಪ ಹೊತ್ತಿಗೆಲ್ಲಾ ಚೇತರಿಸಿ ಕೊಂಡು ಕತ್ತಿಯನ್ನು ಝಳಪಿಸುತ್ತಾ ಒಂದೆರಡು ಹೆಜ್ಜೆ ಮುಂದಿಟ್ಟು ಹಲ್ಲು ಕಟ ಕಟ ಕಡಿಯುತ್ತಾ ಹೀಗೆ ಹುಂಕರಿಸಿದ:

"ಈಸಾರಿ ನೀನೊಬ್ಬ ಹೆಡ್ಡನೆಂದು ನನಗೆ ಖಚಿತವಾಯಿತು. ಮಂತ್ರತಂತ್ರಗಳಲ್ಲಿ ನಿನ್ನನ್ನು ಮೀರಿಸಿದವರಿಲ್ಲವೆಂದು ಗರ್ವಪಡು ತ್ತಿದ್ದ ನೀನು ಈ ಮಾನವರ ಸಹಾಯ ದಿಂದ ನನ್ನನ್ನು ಜಯಿಸಲು ಯತ್ನಿಸುತ್ತಿರು ವೆಯಾ? ನಿನ್ನ ಮಿತ್ರರೆಲ್ಲರನ್ನೂ ಮಣ್ಣುಪಾಲು ಮಾಡಲು ಆ ಕಾಡುಜನರೇ ಸಾಕು."

ಚತುರ್ನೇತ್ರನು ರೆಪ್ಪೆಬಡಿಯದೆ ಒಂದು ಕ್ಷಣ ಏಕಾಕ್ಷಿಯನ್ನು ದುರುಗುಟ್ಟಿಕೊಂಡು ನೋಡುತ್ತಿದ್ದ. ಬೆಟ್ಟದ ಮಧ್ಯಪ್ರದೇಶದಿಂದ ಕುಂಭಾಂಡನ ಕೂಗಾಟ, ಕಾಡುಜನರ ಆರ ಚಾಟ ಕೇಳಿಬರುತಿತ್ತು. ಒಂದುಸಮಯ ಸಮರಸೇನನಿಗೆ ಏನಾದರೂ ವಿಪತ್ತು ಸಂಭ ವಿಸಿತೋ ಎಂಬ ಸಂದೇಹ ವುಂಟಾಯಿತು.



ಕೂಡಲೇ ಆ ಪ್ರದೇಶಕ್ಕೆ ಹೋಗುವುದು ಉಚಿತವೆನ್ನಿಸಿತು ಆತನಿಗೆ.

"ಏಕಾಕ್ಷಿ, ನಿನ್ನ ತಲೆಹರಟೆ ಪ್ರಶ್ನೆಗೆ ಉತ್ತರಹೇಳಲು ನನಗೆ ಸಮಯವಿಲ್ಲ. ಅಷ್ಟೇ ಅಲ್ಲದೆ ನಮ್ಮ ಭಂಟರ ನಡುವೆ ನಡೆಯುವ ಹೋರಾಟದಿಂದ ಆಗುವ ಫಲವೂ ಅಷ್ಟರಲ್ಲೇ ಇದೆ. ನಿನ್ನ ಕತ್ತಿ ಕಠಾರಿಗಳು ನನ್ನನ್ನು ಏನೂ ಮಾಡಲಾರವೆಂಬ ವಿಷಯ ನಿನಗೆ ತಿಳಿದಿದೆ. ನೀನೋ ನಾನೋ ನಿರ್ಧಾರವಾಗುವ ದಿನ ಸಮೀಪಿಸುತ್ತಿದೆ. ಅಂದಿನವರೆವಿಗೂ ವೃಥಾಮಾತಿನಿಂದ ಲಾಭವಿಲ್ಲ" ಎಂದು ಹೇಳಿ ಚತುರ್ನೇತ್ರನು ತಕ್ಷಣ ತನ್ನ ತಲೆಯ ಮೇಲಿದ್ದ ಟೋಪಿಯನ್ನು ಮುಟ್ಟಿದ. ಮರು ಕ್ಷಣವೇ ಆತನು ಕುಂಭಾಂಡನಿಗೂ ಸಮರ





ಸೇನನಿಗೂ ಭಯಂಕರವಾದ ಕದನವಾಗುತ್ತಿರುವ ಸ್ಥಳವನ್ನು ಸೇರಿಕೊಂಡ.

ಒಂದುಕಡೆ ಕಾಡುಜನರು ಈಟಿ, ಭರ್ಜಿಗಳನ್ನು ಬೀಸುತ್ತಾ ಮುಂದಕ್ಕೆ ಬರುತ್ತಿದ್ದಾರೆ. ಸಮರಸೇನನ ಸೈನಿಕರು ತಮ್ಮ ಬಾಣಗಳಿಂದ ಅವರನ್ನು ಅಡ್ಡಗಟ್ಟುತ್ತಿದ್ದಾರೆ!

ಸಮರಸೇನ ಮತ್ತು ಕುಂಭಾಂಡರು ಕತ್ತಿಗಳನ್ನು ಕೈಯಲ್ಲಿ ಹಿಡಿದು ಘೋರ ಕಾಳಗ ಮಾಡುತ್ತಿದ್ದರು. ಆಗ ಚಂದ್ರೋದಯವಾಗಿ ಸೊಗಸಾದ ಬೆಳುದಿಂಗಳು ಚೆಲ್ಲಿತ್ತು. ಗಾಯಗೊಂಡು ಬಿದ್ದಿದ್ದ ಕೆಲವು ಕಾಡುಜನರು ಹಾಹಾಕಾರ ಮಾಡುತ್ತಿದ್ದರು. ಆ ಪ್ರದೇಶವೆಲ್ಲಾ ಕೂಗಾಟ ಕಿರಿಚಾಟಗಳೇ!

ಚತುರ್ನೇತ್ರನು ಈ ಪರಿಸ್ಥಿತಿಯಲ್ಲಿ ಏನು ಮಾಡಿದರೆ ಉತ್ತಮವೆಂದು ಯೋಚಿಸುತ್ತಿದ್ದ. ಸ್ವಲ್ಪಹೊತ್ತಿಗೆಲ್ಲಾ ಅಲ್ಲಿಗೆ ಏಕಾಕ್ಷಿ ಬರುವನೆಂದು ಆತನು ಗ್ರಹಿಸಿದ. ಆದುದರಿಂದ ಅಷ್ಟರಲ್ಲೇ ಕುಂಭಾಂಡನನ್ನೂ ಕಾಡುಜನರನ್ನೂ ಕೊಂದುಬಿಡುವುದು ಒಳಿತೆಂದುಕೊಂಡ. ಒಂದುವೇಳೆ ಅದು ಸಾಧ್ಯವಾಗದೆ ಹೋದರೆ ಸಮರಸೇನ ಮತ್ತು ಆತನ ಸೈನಿಕರನ್ನು ಸುರಕ್ಷಿತವಾದ ಕಡೆ ಸೇರಿಸುವುದು ಯುಕ್ತವೆಂದು ತೋರಿತು.

ಇಷ್ಟರಲ್ಲಿ ಭಯಂಕರವಾದ ಕೂಗಾಟ ಕೇಳಿಸಿತು. ಬೆಳದಿಂಗಳ ರಾತ್ರಿ ಆಹಾರಕ್ಕಾಗಿ ಹೊರಟ ತೋಳಗಳ ಗುಂಪು ರಕ್ತದ ವಾಸನೆ ಹಿಡಿದು ಅತ್ತಕಡೆಗೇ ಓಡೋಡಿ ಬರುತ್ತಿದೆ. ಅವು ಗುಡ್ಡಗಳಮೇಲಿಂದ, ಪೊದೆಗಳಿಂದ ಓಡಿ ಬರುತ್ತಿರುವುದನ್ನು ಎಲ್ಲರೂ ನೋಡಿದರು. ಯುದ್ಧಮಾಡಿ ಶತ್ರುಗಳನ್ನು ಕೊಲ್ಲುವಷ್ಟರೊಳಗೆ ಅವು ತಮ್ಮನ್ನೇ ಮುಗಿಸಿಬಿಡುವುವೆಂದು ಕಾಡುಜನ ಹಾಗೂ ಸೈನಿಕರು ತಮ್ಮ ಕದನವನ್ನು ನಿಲ್ಲಿಸಿ ಅಲ್ಲಿಂದ ಪಲಾಯನ ಮಾಡಲು ಪ್ರಾರಂಭಿಸಿದರು. ಕುಂಭಾಂಡ ಮತ್ತು ಸಮರಸೇನರೂ ತಮ್ಮ ಯುದ್ಧವನ್ನು ನಿಲ್ಲಿಸಿ, ತಮ್ಮ ತಮ್ಮ ಅನುಚರರು ಪಲಾಯನ ಮಾಡುವ ದಿಕ್ಕಿಗೇ ಓಡಲಾರಂಭಿಸಿದರು.

[ಇನ್ನೂ ಇದೆ]






# ಕೈಯಿಂದ ಜಾರಿದ ಪದವಿ

ಸಣ್ಣದೊಂದು ಹಳ್ಳಿಯಲ್ಲಿ ಮಾದ, ಅಂತ ಒಬ್ಬ ತರುಣನಿದ್ದ. ಆತನಿಗೆ ತಂದೆ ತಾಯಿಗಳಿರಲಿಲ್ಲ; ಬಂಧುಬಳಗವೂ ಇರಲಿಲ್ಲ. ಜೀವನೋಪಾಯಕ್ಕೆ ಉಪಯೋಗವಾಗುವ ಯಾವ ವೃತ್ತಿಯೂ ಆತನಿಗೆ ಸಿದ್ಧಿಸಿರಲಿಲ್ಲ.

ಒಂದು ದಿನ ರಾತ್ರಿ ಊಟ ಮುಗಿಸಿಕೊಂಡು ಹಳ್ಳಿಯ ಹಲಕೆಲವು ಹಿರಿಯರು ಹರಟೆಹೊಡೆಯಲು ಒಂದು ಆಲದಮರದ ಕೆಳಗೆ ಕುಳಿತುಕೊಂಡರು. ಮಾತಿನ ಸಂದರ್ಭದಲ್ಲಿ ಬಡವನಾದ ಮಾದನ ಪ್ರಸ್ತಾವನೆ ಬಂತು. ಅವನಿಗೆ ಯಾವುದಾದರೊಂದು ಕಸಬನ್ನು ಕಲ್ಪಿಸಿ, ಸಾಧ್ಯವಾದರೆ ಸಂಸಾರಿಗನನ್ನಾಗಿ ಮಾಡುವುದು ಹಿರಿಯರಾದ ತಮ್ಮ ಕರ್ತವ್ಯವೆಂದು ಪರಿಗಣಿಸಿದರು.

ಆ ಮಾರನೇಯದಿನದಿಂದ ಹಳ್ಳಿಯಲ್ಲಿದ್ದ ನೂರು ಕುಟುಂಬಗಳಿಗೂ ತಲಾ ಒಂದೊಂದು ಕಾವಡಿ ಹೊಳೆನೀರನ್ನು ತಂದು ಸುರಿಯಬೇಕೆಂದು ಮಾದನಿಗೆ ತಿಳಿಸಿದರು. ಅದಕ್ಕೆ ಪ್ರತಿಫಲವಾಗಿ ದಿನಕ್ಕೊಬ್ಬರ ಮನೆಯಲ್ಲಿ ಊಟ ಹಾಕುವುದೆಂತಲೂ, ನಿರ್ಧರಿಸಿದರು.

ಅಂದಿನಿಂದ ಮಾದ ಮುಂಜಾನೆಯಿಂದ ಸಂಜೆಯವರೆವಿಗೆ ಹಳ್ಳಿಯಲ್ಲಿದ್ದ ಪ್ರತಿ ಕುಟುಂಬಕ್ಕೂ ಒಂದೊಂದು ಕಾವಡಿ ನೀರು ತಂದು ಕೊಡುತ್ತಿದ್ದನು. ಕೆಲವು ದಿನಗಳನಂತರ ಒಂದು ರಾತ್ರಿ ಹಳ್ಳಿಯ ಹಿರಿಯರು ಕೆಲವರು ಅದೇ ಆಲದಮರದ ಕೆಳಗೆ ಕುಳಿತುಕೊಂಡು ಆ ಮಾತು ಈ ಮಾತು ಆಡಿಕೊಳ್ಳುತ್ತಿದ್ದರು. ಮಾದನೂ ಸಹ ಸ್ವಲ್ಪ ದೂರದಲ್ಲಿ ಕುಳಿತು ಅವರ ಮಾತುಗಳನ್ನು ಕೇಳುತ್ತಿದ್ದನು.

ಆ ಹಳ್ಳಿಯಲ್ಲಿದ್ದ ಪುರಾತನ ಶಿವಾಲಯವನ್ನು ಕುರಿತು ಸಂಭಾಷಣೆ ಪ್ರಾರಂಭವಾಯಿತು. ಆ ಆಲಯದಲ್ಲಿ ಒಂದು ಶಾಸನವಿದೆ ಎಂತಲೂ, ಅದರಲ್ಲಿ ಅತಿ ವಿಚಿತ್ರವಾದ ವಿಷಯ ಇರುವುದೆಂತಲೂ ಒಬ್ಬ ಹೇಳಿದ.

ಆ ವಿಷಯ ತಿಳಿಯಲು ಉಳಿದವರು ಕುತೂಹಲವನ್ನು ವ್ಯಕ್ತಪಡಿಸಿದರು. ಅದಕ್ಕೆ

ಆರ್. ನಾರಾಯಣ



ಸಿದ್ದೆ ಬರಲಿಲ್ಲ. ' ಪುರಾತನಕಾಲದ ಆ ಶಾಸನ ಸುಳ್ಳು ಹೇಗೆ ಆಗುತ್ತದೆ? ಇವರಿಗೆಲ್ಲ ನಂಬಿಗೆ ಯಿಲ್ಲ. ನೂರ ಐವತು ಕೊಡ ನೀರು ಹೊಳೆ ಯಿಂದ ತರುವಸಹನೆ, ಇಲ್ಲದಿರುವುದರಿಂದಲೇ ಆ ಶಾಸನವನ್ನು ಅಪಹಾಸ್ಯಮಾಡಿದರು ' ಎಂದು ಆತನು ಅಭಿಪ್ರಾಯಪಟ್ಟ.

"ನನ್ನ ಕೆಲಸ ನೀರು ಹೊರುವುದು. ನೂರಐವತ್ತು ಕೊಡ ನೀರುತಂದು ಆ ಶಿವ ಲಿಂಗಕ್ಕೆ ಅಭಿಷೇಕಮಾಡುವೆನು. ಶಾಸನದ ಪ್ರಕಾರ ನಡೆದರೆ ಚಕ್ರವರ್ತಿಯಾಗುವೆನು. ಇಲ್ಲ, ಒಂದಿಂತಿಷ್ಟು ಪುಣ್ಯವಾದರೂ ಲಭಿ ಸುವುದಿಲ್ಲವೇ? ಇದನ್ನು ಪೂರ್ಣಮಾಡಿಯೇ ತೀರಬೇಕು" ಎಂದು ಅಂದುಕೊಂಡ ಮಾದ.

ಆತನು "ಯಾರೇ ಆಗಲೀ ಶಿವಲಿಂಗಕ್ಕೆ ನೂರಐವತ್ತು ಕೊಡ ನೀರನ್ನು ಅಭಿಷೇಕ ಮಾಡಿದರೆ ಆತನು ಚಕ್ರವರ್ತಿ ಆಗುವನು ಎಂದು ಆ ಶಾಸನದಲ್ಲಿ ಬರೆದಿದೆ" ಎಂದನು.

ಅಲ್ಲಿದ್ದವರಲ್ಲೊಬ್ಬನು ಆ ಶಾಸನ ಸುಳ್ಳು ಎಂದು ವಾದಿಸಿದ. "ನೂರ ಐವತ್ತು ತಂಬಿಗೆ ನೀರು ಶಿವಲಿಂಗಕ್ಕೆ ಅಭಿಷೇಕಮಾಡಿದಾ ಕ್ಷಣ ಚಕ್ರವರ್ತಿಯ ಪದವಿ ಲಭ್ಯವಾಗುವಂತಿದ್ದರೆ ಆ ಕಾರ್ಯ ಪ್ರತಿಯೊಬ್ಬನೂ ಮಾಡುತ್ತಿದ್ದ. ಎಲ್ಲರೂ ಚಕ್ರವರ್ತಿಗಳಾಗಿ ಬಿಡುತ್ತಿದ್ದರು" ಎಂದು ಪರಿಹಾಸ್ಯಮಾಡಿದ. ಸ್ವಲ್ಪ ಚರ್ಚೆ ಯಾದನಂತರ ಉಳಿದ ಹಿರಿಯರೂಸಹ ಆ ಶಾಸನ ಸುಳ್ಳೆಂದು ತೀರ್ಮಾನಿಸಿದರು. ಇದನ್ನು ಕೇಳಿದ ಮಾದನಿಗೆ ಅಂದು ರಾತ್ರಿ

ಮಾರನೇಯ ದಿನ ಹಳ್ಳಿಯಲ್ಲಿದ್ದ ಕುಟುಂಬ ಗಳಿಗೆ ನೀರು ತಂದು ತುಂಬಿದ ತರುವಾಯ, ಶಿವಲಿಂಗಕ್ಕೆ ಅಭಿಷೇಕಮಾಡಲು ಆರಂಭಿಸಿದ. ಸರಿಯಾಗಿ ನೂರನಲವತ್ತು ಬಿಂದಿಗೆ ನೀರು ಅಭಿಷೇಕ ಮಾಡುವವೇಳೆಗೆ ಮಾದ ನಿತ್ರಾಣ ನಾದ. ಉಬ್ಬಸಬರಲು ತೊಡಗಿತು. ಆಯಾಸ ದಿಂದ ಕಾಲುಕುಸಿಯಲಾರಂಭಿಸಿತು. ಆದರೂ ಸಾಹಸ ಬಿಡಲಿಲ್ಲ. "ಇನ್ನೊಂದು ಹತ್ತು ಬಿಂದಿಗೆ ನೀರುತಾನೇ, ಕೊಂಚ ಸಹನೆತಂದು ಕೊಂಡರೆ ಸರಿಹೋಗುವುದು" ಎಂದು ನಿರ್ಧಾರ ಮಾಡಿಕೊಂಡ ಮಾದ.

ಆದರೆ ಮುತ್ತೆಂಟು ಬಿಂದಿಗೆ ನೀರು ತರುವ ವೇಳೆಗೆ ಆಯಾಸ ಮುತ್ತಷ್ಟು ಹೆಚ್ಚಾಯಿತು. ಆಯಾಸಪಡುತ್ತಾ ಆತನು ಶಿವಲಿಂಗದಕಡೆ

ನೋಡಿ, ತರುವಾಯ ತನ್ನನ್ನೇ ತೀವ್ರವಾಗಿ ಪರೀಕ್ಷಿಸಿ ನೋಡಿಕೊಂಡ.

"ನೂರನಲವತ್ತೆಂಟು ಬಿಂದಿಗೆ ಅಭಿಷೇಕ ಮಾಡಿದರೂ ನನ್ನಲ್ಲಿ ಯಾವ ವಿಧವಾದ ಚಕ್ರವರ್ತಿ ಚಿಹ್ನೆಗಳು ಕಾಣಬರುತ್ತಿಲ್ಲ. ಆದುದರಿಂದಲೇ ಹಳ್ಳಿಯ ಹಿರಿಯರು ಈ ಶಾಸನ ಸುಳ್ಳೆಂದು ಹೇಳಿದರು. ಅವರ ಮಾತಿನಲ್ಲಿ ಸತ್ಯವಿದೆ. ನಾನು ತಿಳಿಗೇಡಿಯಾದುದರಿಂದ ಸುಮ್ಮಸುಮ್ಮನೆಯೇ ಇಷ್ಟೊಂದು ಪ್ರಯಾಸಪಟ್ಟೆ. ಸರಿ, ಆದುದೇನೋ ಆಯಿತು. ಈಸಾರಿ ಕಾವಡಿ ತಂದು ಆ ಎರಡು ಕೊಡ ನೀರನ್ನು ಶಿವಲಿಂಗದಮೇಲೆ ಎತ್ತಿ ಬಡಿಯುವೆನು. ನನಗೆ ಅಕಾರಣವಾಗಿ ತೊಂದರೆಕೊಟ್ಟ ಈ ಶಿವಲಿಂಗ ಪುಡಿಪುಡಿಯಾಗಲೇಬೇಕು" ಎಂದು ಕೋಪದಿಂದ ಹೊಳೆಯಕಡೆ ಹೋದ. ಒಂದು ಕಾವಡಿಯೊಂದಿಗೆ ಹಿಂತಿರುಗಿದ.

ಆವೇಶದಿಂದ ನೀರಕಾವಡಿಯನ್ನು ಎತ್ತಿಕೊಂಡು ಬಂದ. ನೀರಿನ ಬಿಂದಿಗೆಗಳೆರಡನ್ನೂ ಎತ್ತಿ ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಶಿವಲಿಂಗದಮೇಲೆ ಕುಕ್ಕಿದ.

ಆ ಮರುಕ್ಷಣವೇ ಶಿವಲಿಂಗವು ಎರಡಾಗಿ ಸೀಳಿ, ಅದರಮಧ್ಯೆ ತ್ರಿಶೂಲಧಾರಿಯಾದ ಶಿವನು ಕಾಣಿಸಿಕೊಂಡನು.

"ಎಲೈ, ಮಾದ, ನೀನು ಒಬ್ಬ ಮೂರ್ಖ; ಮಾಡಬೇಕೆಂದುಕೊಂಡ ಕೆಲಸವನ್ನು ಭಕ್ತಿ, ಶ್ರದ್ಧೆಗಳಿಂದ ಮಾಡಿ ಫಲವನ್ನು ಅಪೇಕ್ಷಿಸುವುದು ಬುದ್ಧಿವಂತರ ಲಕ್ಷಣ. ನಿನ್ನ ಮೂರ್ಖತೆಯಿಂದ ಫಲವನ್ನು ಹಾಳುಮಾಡಿಕೊಂಡೆ. ಇನ್ನೆರಡು ಕೊಡ ನೀರನ್ನು ಭಕ್ತಿಯಿಂದ ಅಭಿಷೇಕಮಾಡಿದ್ದೇ ಆದಪಕ್ಷಕ್ಕೆ ನೀನು ನಿಜವಾಗಿ ಚಕ್ರವರ್ತಿಯ ಪದವಿಗೆ ಅರ್ಹನಾಗುತ್ತಿದ್ದೆ. ದೂರ ಸರಿ. ಇಲ್ಲಿಂದ ತಕ್ಷಣ ಹೊರಡು ;" ಎಂದು ಗದರಿಸಿದ ಶಿವ.

ಮಾದನು ತಲೆ ತಗ್ಗಿಸಿಕೊಂಡು ಹೊರಗಡೆ ಹೋಗಲು ಬೆನ್ನು ತಿರುಗಿಸಿದ ಕೂಡಲೇ ಶಿವನೂ, ಸೀಳಿಹೋಗಿದ್ದ ಶಿವಲಿಂಗವೂ ಅಲ್ಲಿಂದ ಮಾಯವಾಗಿತ್ತು.





# ಕುಶಲಮತಿ

ಪೂರ್ವಕಾಲದಲ್ಲಿ, ಒಬ್ಬಾನೊಬ್ಬ ಜಮೀನ್ದಾರನ ಗ್ರಾಮದಲ್ಲಿ ಜ್ವಾಲಾಗ್ನಿ ಎಂಬ ಹೆಸರುವಾಸಿಯಾದ ಶಿಲ್ಪಿಯಿದ್ದ. ಆತನಿಗೆ ನಾಲ್ಕುಜನ ಮಕ್ಕಳಿದ್ದರು. ಅವರ ಹೆಸರು ರಾಮಾಗ್ನಿ, ಭರತಾಗ್ನಿ, ರೂಪಾಗ್ನಿ, ಕಾಲಾಗ್ನಿ.

ಜ್ವಾಲಾಗ್ನಿ ಮುದುಕನಾದ. ಆತನು ಪ್ರಾಯದಲ್ಲಿ ಕಷ್ಟಪಟ್ಟು ಸಂಪಾದಿಸಿದ ಹಣವೆಲ್ಲಾ ಸಂಸಾರ ನಿರ್ವಹಣೆಗೆ ವೆಚ್ಚವಾಯಿತು. ಮಕ್ಕಳಿಗೆ ಶಿಲ್ಪವಿದ್ಯೆ ಕೈಗೂಡಲಿಲ್ಲ. ಅಣ್ಣತಮ್ಮಂದಿರು ನಾಲ್ವರೂ ಶಿಲ್ಪವಿದ್ಯೆಗೆ ಬದಲಾಗಿ ಚಿನ್ನದ ಆಭರಣಗಳನ್ನು ಮಾಡುವುದನ್ನು ಕಲಿತರು. ತಂದೆ ಕೈತುಂಬಾ ಸಂಪಾದಿಸುತ್ತಿದ್ದುದರಿಂದ ಮಕ್ಕಳು ಶ್ರದ್ಧೆವಹಿಸಿ ಕೆಲಸ ಮಾಡುತ್ತಿರಲಿಲ್ಲ.

ಜ್ವಾಲಾಗ್ನಿ ತಾನು ತುಂಬಾ ಮುದುಕನಾದುದರಿಂದ ಬಹುಕಾಲ ಜೀವಿಸಲಾರೆನೆಂದು ಗ್ರಹಿಸಿದ. ಇನ್ನು ಮಕ್ಕಳು ಕಷ್ಟಪಟ್ಟು ದುಡಿಯದಿದ್ದರೆ ಮುಂದೆ ಅವರು ಅನೇಕ ಕಷ್ಟಕೋಟಲೆಗಳಿಗೆ ಗುರಿಯಾಗಬೇಕಾದೀತೆಂದು ಆತನು ಅರಿತುಕೊಂಡ.

ಒಂದು ದಿನ ರಾತ್ರಿ ಜ್ವಾಲಾಗ್ನಿ ತನ್ನ ನಾಲ್ವರು ಪುತ್ರರನ್ನು ಹತ್ತಿರಕ್ಕೆ ಕರೆದು:

ಮಕ್ಕಳೇ, ನಾನು ಮುದುಕನಾದೆ. ಬಹಳ ದಿವಸ ಜೀವಿಸಲಾರೆ. ನಿಮಗಂತೂ ನನ್ನ ಶಿಲ್ಪವಿದ್ಯೆ ಕೂಡಿಬರಲಿಲ್ಲ. ನೀವು ಕಲಿತಿರುವ ಕೆಲಸದಲ್ಲಿ ಬರುವ ಅತಿ ಸ್ವಲ್ಪ ಆದಾಯದಿಂದ ಅದು ಹೇಗೆ ತಾನೇ ಸುಖಜೀವನ ಮಾಡುವಿರೋ ನನಗೆ ಅರ್ಥವಾಗುತ್ತಿಲ್ಲ. ಇದೇ ನನಗೊಂದು ಸಮಸ್ಯೆಯಾಗಿಬಿಟ್ಟಿದೆ” ಎಂದು ತನಗಿದ್ದ ಚಿಂತೆಯನ್ನು ತಿಳಿಸಿದ.

ಅದಕ್ಕೆ ಹಿರಿಯವನಾದ ರಾಮಾಗ್ನಿ “ಅಪ್ಪಾ ನೀವು ನಮ್ಮಬಗ್ಗೆ ಏನೂ ಚಿಂತಿಸಬೇಡಿ. ನಾವು ಕಲಿತಿರುವ ಕೆಲಸದಲ್ಲೂ ತಿಳುವಳಿಕೆಯಿದ್ದರೆ ಲಾಭ ಪಡೆಯಬಹುದು. ನಾಳೆಯಿಂದ ಗಿರಾಕಿಗಳು ನಗನಟ್ಟು ಮಾಡಲು ತಂದೀಯುವ ಚಿನ್ನದಲ್ಲಿ ಮೂರುಭಾಗ ಅವರದು,

ವಿ. ಎಸ್. ಗುರಿಕಾರ

ನಾಲ್ಕನೆಯಭಾಗ ನನ್ನದು" ಎಂದ. ಇದನ್ನು ಕೇಳಿ ಜ್ವಾಲಾಗ್ನಿ ಹಿರಿಯವನ ಬುದ್ಧಿಗೆ ಸಂತೋಷಗೊಂಡ. ಯಾವುದೋ ಒಂದು ರೀತಿ ಪ್ರಪಂಚದಲ್ಲಿ ಬದಕುವಭಾರ ಹೊರ ಬಲ್ಲವನಾಗುವನೆಂದು ಸಮಾಧಾನ ಹೊಂದಿದ. ಆಮೇಲೆ ಎರಡನೆಯ ಮಗ ಭರತಾಗ್ನಿಯನ್ನು ಕುರಿತು ಹಾಗೆಯೇ ಕೇಳಿದ.

ಅದಕ್ಕೆ ಭರತಾಗ್ನಿ "ತಂದೆಯೇ, ನನ್ನ ಬಗ್ಗೆ ವಿಚಾರ ಮಾಡಬೇಡಿ. ನಾಳೆಯಿಂದ ನನ್ನಲ್ಲಿಗೆ ಬರುವ ಬಂಗಾರದಲ್ಲಿ ಅರ್ಧಪಾಲು ನನ್ನದು ಉಳಿದರ್ಧಪಾಲು ಕೊಟ್ಟವರದು" ಎಂದ.

ಜ್ವಾಲಾಗ್ನಿ ಸಂತಸಗೊಂಡು ಮೂರನೇ ಯವನಾದ ರೂಪಾಗ್ನಿಯನ್ನು ಕೇಳಿದ. ಅದಕ್ಕೆ ರೂಪಾಗ್ನಿ, "ಅಪ್ಪಾ, ನಿಮಗೇಕೆ ಈ ಬಗೆಯ ಯೋಚನೆ? ನಾಳೆಯಿಂದ ನನ್ನಲ್ಲಿಗೆ ಯಾರು ಚಿನ್ನವನ್ನು ತಂದರೂ ಮೂರುಭಾಗ ನನ್ನದು, ಒಂದುಭಾಗ ಅವರದೂ ಆಗುತ್ತದೆ" ಎಂದ.

ಅನಂತರ ಕಡೆಯವನಾದ ಕಾಲಾಗ್ನಿಯನ್ನು ಕೇಳಿದ. ಅವನು "ಅಪ್ಪಾ ನೀವು ನಮಗಾಗಿ ಭಯಪಡಬೇಡಿ. ಹಾಯಾಗಿ ಕಾಲಕಳೆಯಿರಿ. ಧನ ಬೇಕಾದರೆ ರಾಶಿಗಟ್ಟಲೆ ಸಂಪಾದಿಸಿ ನಿಮ್ಮ ಪಾದಗಳಬಳಿ ಸುರಿಯು ತ್ತೇನೆ. ನಾಳೆಯಿಂದ ನನ್ನಲ್ಲಿಗೆ ಯಾರು ಚಿನ್ನ ತಂದು ಕೊಟ್ಟರೂ ಅದೆಲ್ಲಾ ಅವರದಲ್ಲ; ನನ್ನದೇ!" ಎಂದ.

ಜ್ವಾಲಾಗ್ನಿ ತನ್ನ ಪುತ್ರರು ಕಾರ್ಯಶಾಲಿ ಗಳೆಂದು ಅರಿತುಕೊಂಡ. ಆತನಿಗೆ ಕಡೆಯವ



ನಾದ ಕಾಲಾಗ್ನಿಯ ಮಾತು ತುಂಬಾ ವಿಚಿತ್ರ ವಾಗಿ ತೋರಿತು. ನಂಬಲು ಸಾಧ್ಯವಾಗಲಿಲ್ಲ.

ಇದೇ ಅನುಮಾನ ಅಂದು ರಾತ್ರಿ ಮಾರು ವೇಷದಲ್ಲಿ ತಿರುಗುತ್ತಿದ್ದ ಜಮೀನ್ದಾರನಿಗೂ ಉಂಟಾಯಿತು. ಮಾರುವೇಷದಲ್ಲಿದ್ದ ಜಮೀನು ದಾರನು ಕಿಟಕಿಯಲ್ಲಿ ಹೊಂಚುಹಾಕಿ ತಂದೆ ಮಕ್ಕಳ ಸಂಭಾಷಣೆಯನ್ನು ಪೂರ್ತಿಯಾಗಿ ಕೇಳಿಕೊಂಡಿದ್ದನು. ಕಾಲಾಗ್ನಿ ತಂದೆಗೆ ಹೇಳಿದ ಮಾತನ್ನು ಹೇಗೆ ಉಳಿಸಿಕೊಳ್ಳುವನೋ ನೋಡಬೇಕೆಂದು ಆತನು ನಿರ್ಧರಿಸಿದನು.

ಬೆಳಗಾಯಿತು. ಜಮೀನುದಾರನ ಬಳಿ ಯಿಂದ ಕಾಲಾಗ್ನಿಗೆ ಕರೆಬಂತು. ಅವನು ಅಲ್ಲಿಗೆ ಹೊರಟು ಜಮೀನ್ದಾರನ ಮುಂದೆ ನಿಂತ. "ಕಾಲಾಗ್ನಿ, ನೀನು ಕುಶಲ ಕಂಸಾಳಕ




ನೆಂದು ಕೇಳಿರುವೆವು. ನಾನು ನಮ್ಮ ಕೇಶವ ಸ್ವಾಮಿಗೆ ಚಿನ್ನದ ಕಿರೀಟ ಮಾಡಿಸಬೇಕೆಂದಿದ್ದೇನೆ. ಆ ಕಾರ್ಯ ನಿನಗೆ ಒಪ್ಪಿಸುವೆವು. ಒಂದು ತಿಂಗಳ ಅವಧಿಯಲ್ಲಿ ಕೆಲಸ ಮುಗಿಸಬಲ್ಲೆಯಾ?" ಎಂದು ಕೇಳಿದ ಜಮೀನ್ದಾರ.

"ಸ್ವಾಮಿ, ಒಂದು ತಿಂಗಳೇಕೆ? ಸರಿಯಾಗಿ ಇಪ್ಪತ್ತು ದಿನಗಳಲ್ಲಿ ಕಿರೀಟ ಮಾಡಿ ಕೊಡುತ್ತೇನೆ" ಎಂದ.

ಜಮೀನ್ದಾರನು ದಂಗುಬಡಿದವನಂತೆ ಕಾಲಾಗ್ನಿಯಕಡೆ ನೋಡುತ್ತಾ "ಇಪ್ಪತ್ತು ದಿವಸಗಳಲ್ಲಿ ಕಿರೀಟ ಮಾಡಿ ಮುಗಿಸುನೆಯಾ? ಹಾಗೆಂದರೆ ನೀನು ತುಂಬಾ ಗಟ್ಟಿಗನೆಂದಾಯಿತು. ಸರಿ, ಕೆಲಸವನ್ನು ನಮ್ಮ ಮನೆಯಲ್ಲೇ ಪ್ರಾರಂಭಿಸು. ದೇವರ ಕಿರೀಟವನ್ನು ಮೊದಲಿಂದ ಕಡೆಯತನಕ ಹತ್ತಿರದಲ್ಲಿದ್ದೇ ನೋಡುತ್ತೇವೆ. ಇದೇ ನಮ್ಮ ಅಭಿಲಾಷೆ" ಎಂದ.

ಅಂದೇ ಕಾಲಾಗ್ನಿ ಕಿರೀಟದ ಕಾರ್ಯ ಪ್ರಾರಂಭಮಾಡಿದ. ಜಮೀನ್ದಾರನು ಕುಳಿತು ಕಾಲಾಗ್ನಿಯನ್ನು ಸಾವಿರ ಕಣ್ಣುಗಳಿಂದ ಗಮನಿಸ ತೊಡಗಿದನು.

ಕಾಲಾಗ್ನಿ ಹಗಲೆಲ್ಲಾ ಜಮೀನ್ದಾರನ ಮನೆಯಲ್ಲಿ ಚಿನ್ನದ ಕೆಲಸಮಾಡಿ, ರಾತ್ರಿ ಮನೆಗೆ ಬಂದ ಕೂಡಲೇ ಪಂಚಲೋಹದ ಕಿರೀಟವೊಂದನ್ನು ಮಾಡ ತೊಡಗಿದ. ಈ ಕಿರೀಟವು ಆಕಾರ ಮತ್ತು ಕೆತ್ತನೆಯ ಕೆಲಸದಲ್ಲಿ ಚಿನ್ನದ ಕೀಟವನ್ನೇ ಹೋಲುತ್ತಿತ್ತು.

ಇಪ್ಪತ್ತು ದಿವಸಗಳ ಹೊತ್ತಿಗೆ ಕೋಟೆಯಲ್ಲಿ ಚಿನ್ನದ ಕಿರೀಟವನ್ನೂ, ಮನೆಯಲ್ಲಿ ಪಂಚಲೋಹದ ಕಿರೀಟವನ್ನೂ ಪೂರ್ತಿಗೊಳಿಸಿದ ಕಾಲಾಗ್ನಿ. ತನ್ನ ಕಣ್ಣು ತಪ್ಪಿಸಿ ಕಾಲಾಗ್ನಿ ಬಂಗಾರ ಕದಿಯಲಾರನೆಂದು ದೃಢಪಡಿಸಿಕೊಂಡ ಜಮೀನ್ದಾರ.

"ಕಾಲಾಗ್ನಿ, ನೀನು ಹೇಳಿದ ಪ್ರಕಾರವೇ ಕೆಲಸ ಮುಗಿಸಿದೆ. ನಾಳೆಯಿಲ್ಲ, ನಾಳಿದ್ದು ಈ ಕಿರೀಟವನ್ನು ಸ್ವಾಮಿಯವರಿಗೆ ಅರ್ಪಿಸುತ್ತೇವೆ. ಅದನ್ನು ಕೊಳದ ನೀರಿನಿಂದ ಪವಿತ್ರಗೊಳಿಸಬೇಕಲ್ಲವೇ. ನೀನು ನಾಳಿದ್ದು ಸೂರ್ಯೋದಯಕ್ಕೆ ಬಂದುಬಿಡು" ಎಂದು ಹೇಳಿದ ಜಮೀನ್ದಾರ.

ಕಾಲಾಗ್ನಿ ಆತನ ಅನುಮತಿ ಪಡೆದು ಮನೆಗೆ ಹಿಂತಿರುಗಿದ. ಆ ರಾತ್ರಿಯೇ ಪಂಚ

ಲೋಹದ ಕಿರೀಟವನ್ನು ಕೊಳದಲ್ಲಿ ಒಂದೆಡೆ ಬಚ್ಚಿಟ್ಟ. ಎರಡನೇಯ ದಿವಸ ಬೆಳಿಗ್ಗೆ ಜಮೀನ್ದಾರ ಮನೆಗೆ ಹೊರಟ.

ಜಮೀನ್ದಾರನು ಚಿನ್ನದ ಕಿರೀಟವನ್ನು ಕಾಲಾಗ್ನಿಯ ಕೈಗೆ ಕೊಟ್ಟು ಭಾರಿ ಮೆರವಣಿಗೆಯಲ್ಲಿ ಕೊಳದ ಹತ್ತಿರಕ್ಕೆ ಹೋದ. ಅಲ್ಲಿ ಜಮೀನ್ದಾರನು, ಪಕ್ಕದಲ್ಲಿ ನಿಂತುಕೊಂಡು ನೋಡುತ್ತಿರುವಾಗಲೇ ಕಾಲಾಗ್ನಿ ಕೊಳದಲ್ಲಿ ಇಳಿದು ಕಿರೀಟವನ್ನು ಶುಭ್ರಗೊಳಿಸುವವನಂತೆ ನೀರಿನಲ್ಲಿ ಅಡಿಗಡಿಗೆ ಮುಳುಗಿಸಿ ತೆಗೆಯುತ್ತಿದ್ದ. ಹಾಗೇ ಸಮಯ ಸಾಧಿಸಿ ಬಂಗಾರದ ಕಿರೀಟವನ್ನು ಕೆಸರಿನಲ್ಲಿ ತುಳಿದು, ಅಲ್ಲಿಯೇ ಬಚ್ಚಿಟ್ಟಿದ್ದ ಪಂಚಲೋಹದ ಕಿರೀಟವನ್ನು ಹೊರತೆಗೆದ.

ಈ ಬದಲಾವಣೆಯನ್ನು ಯಾರೂ ಗುರುತಿಸಲಿಲ್ಲ. ಪಂಚಲೋಹದ ಕಿರೀಟಕ್ಕೂ, ಬಂಗಾರದ ಕಿರೀಟಕ್ಕೂ ಆಕಾರ ಮತ್ತು ಗಾತ್ರದಲ್ಲಿ ಎಳ್ಳಷ್ಟೂ ವ್ಯತ್ಯಾಸವಿರಲಿಲ್ಲ.

ಜಮೀನ್ದಾರನು ಕೇಶವಸ್ವಾಮಿಗೆ ಶಾಸ್ತ್ರೋಕ್ತವಾಗಿ ಕಿರೀಟವನ್ನು ಅರ್ಪಿಸಿದ. ಕಾಲಾಗ್ನಿ ಆ ರಾತ್ರಿಯೇ ಕೊಳದ ಹತ್ತಿರಕ್ಕೆ ಹೋಗಿ ಯಾರಿಗೂ ತಿಳಿಯದಂತೆ ಚಿನ್ನದ ಕಿರೀಟವನ್ನು ಮನೆಗೆ ತಂದುಕೊಂಡ.

ಒಂದು ತಿಂಗಳಾಯಿತು. ಜಮೀನ್ದಾರನು ಏನೋ ಆಲೋಚಿಸುತ್ತಿರುವಾಗ ಫಕ್ಕನೆ ಆತನಿಗೆ ಕಾಲಾಗ್ನಿಯ ಸಂಗತಿ ನೆನೆಪಾಯಿತು. ಮಾಡಲು ಸಾಧ್ಯವಿಲ್ಲದ ಕೆಲಸ ಮಾಡಿ



ಬಿಡುತ್ತೇನೆಂದು ಕೆಲವರು ಏಕಾದರೂ ಜಂಬ ಕೊಚ್ಚಿಕೊಳ್ಳುವರೋ ಎಂದು ಆತನು ಯೋಚಿಸಿದ. 'ವೃದ್ಧನಾದ ತಂದೆಯ ಬಳಿಯಲ್ಲಿ ಕಾಲಾಗ್ನಿ ಆರೀತಿ ಮಾತನಾಡಬಾರದಿತ್ತು' ಎಂದೆನ್ನಿಸಿತು ಆತನಿಗೆ. ಒಂದು ಸಾರಿ ಕಾಲಾಗ್ನಿಯನ್ನು ಬರಮಾಡಿಕೊಂಡು, ಚೆನ್ನಾಗಿ ಬುದ್ಧಿಹೇಳಬೇಕೆಂದು ತೋರಿತು. ಕಾಲಾಗ್ನಿಯನ್ನು ಕರೆದು ತರುವಂತೆ ನೌಕರರಿಗೆ ಆಜ್ಞೆ ಮಾಡಿದ.

ಕಾಲಾಗ್ನಿ ಬಂದವನೆ ಜಮೀನ್ದಾರನಿಗೆ ಕೈ ಜೋಡಿಸಿ ನಮಸ್ಕಾರಮಾಡಿ, ಕೈಕಟ್ಟಿಕೊಂಡು ನಿಂತುಕೊಂಡ. ಆಗ ಜಮೀನ್ದಾರನು:

"ಕಾಲಾಗ್ನಿ, ನಿನ್ನನ್ನು ಬರಮಾಡಿಕೊಂಡಿದ್ದು ಹೊಗಳಲು ಅಲ್ಲ; ತೆಗಳಲೂ

ಅಲ್ಲ. ಒಂದು ಸಲಹೆ ಕೊಡಲು ಕರೆಯಿಸಿದೆ. ಹಿರಿಯರ ಬಳಿಯಲ್ಲಿ ಜಂಭಕೊಚ್ಚಬಾರದು. ಅದರಲ್ಲೂ ದೇವರಸಮಾನನಾದ ತಂದೆಯ ಬಳಿಯಲ್ಲಿ ಪ್ರತಿಷ್ಠೆ ಪ್ರದರ್ಶಿಸುವುದು ಮಹಾ ಪಾಪ. ಅಂದು ರಾತ್ರಿ ನೀನು ನಿಮ್ಮ ತಂದೆ ಯೊಂದಿಗೆ ಹೇಳಿದ ಮಾತು ಕೇಳಿದೆವು. ಒಂದು, ಎರಡು, ಮೂರುಭಾಗ ಮಾತ್ರವಲ್ಲ, ಬಂಗಾರವೆಲ್ಲಾ ನನ್ನದೇ ಎಂದೆ! ಈಗ ನಾವು ಮಾಡಿಸಿರುವ ಸ್ವಾಮಿಯವರ ಕಿರೀಟದಲ್ಲಿ ಒಂದು ಗುಲಗಂಜಿ ತೂಕದಷ್ಟೂ ಚಿನ್ನವನ್ನು ನಿನ್ನದನ್ನಾಗಿ ಮಾಡಿಕೊಳ್ಳಲಾರದಾದೆ" ಎಂದು ಮೂದಲಿಸಿದ.

ಕಾಲಾಗ್ನಿ ಜಮೀನ್ದಾರನ ಮಾತು ಕೇಳಿ ಒಂದು ಕ್ಷಣ ಸುಮ್ಮನಿದ್ದು ತರುವಾಯ ವಿನಯದಿಂದ ಹೀಗೆ ನುಡಿದ:

"ಮಹಾಸ್ವಾಮಿ, ನೀವು ಈ ಗ್ರಾಮಕ್ಕೆ ರಾಜರಂತಿರುವಿರಿ. ನನ್ನ ಪ್ರಾಣ, ಸ್ವತ್ತು ನಿಮ್ಮ ಕೈಯಲ್ಲಿದೆ. ನಾನು ನನ್ನ ತಂದೆ ಯೊಂದಿಗೆ ಬಡಾಯಿಕೊಚ್ಚಲಿಲ್ಲ. ನಿಜ ನುಡಿ ದರೆ ನಾನು ನಿಮ್ಮ ಶಿಕ್ಷೆಗೆ ಗುರಿಯಾಗ ಬೇಕಾಗುವುದು. ಕ್ಷಮಿಸಿ"

"ನಿನ್ನನ್ನು ಶಿಕ್ಷೆಗೆ ಗುರಿಮಾಡುವುದಿಲ್ಲ. ನಿಜ ಹೇಳು. ಅಭಯ ಕೊಡುತ್ತಿದ್ದೇವೆ" ಎಂದ ಜಮೀನ್ದಾರ.

ಆಗ ಕಾಲಾಗ್ನಿ ತಾನು ಮಾಡಿದ ಮೋಸ ವನ್ನು ವಿವರವಾಗಿ ವರ್ಣಿಸಿದ. ಎಲ್ಲವನ್ನೂ ಕೇಳಿ ನಗುತ್ತಾ "ಅಯ್ಯಾ, ಕಾಲಾಗ್ನಿ, ನೀನು ಪ್ರಚಂಡ. ಸ್ವಾಮಿಗೆ ಪಂಚಲೋಹದ ಕಿರೀಟ ವನ್ನು ಕಾಣಿಕೆ ಕೊಡುವುದು ಒಳ್ಳೆಯದಲ್ಲ. ನಿನ್ನ ಹತ್ತಿರವಿರುವ ಚಿನ್ನದ ಕಿರೀಟವನ್ನು ನನಗೆ ಕೊಟ್ಟುಬಿಡು. ಅದರಷ್ಟು ಚಿನ್ನ ಕೊಡುವೆವು. ನಿನ್ನ ಸೂಕ್ಷ್ಮಬುದ್ಧಿಗೆ ನೂರು ಚಿನ್ನದ ನಾಣ್ಯಗಳನ್ನು ಬಹುಮಾನ ಕೊಡು ತ್ತೇವೆ" ಎಂದ ಜಮೀನುದಾರ.

ಕಾಲಾಗ್ನಿ ಜಮೀನ್ದಾರನಿಗೆ ತನ್ನಲ್ಲಿದ್ದ ಚಿನ್ನದ ಕಿರೀಟವನ್ನು ಕೊಟ್ಟು ಆತನಿಂದ ಚಿನ್ನವನ್ನೂ, ನೂರು ಮೊಹರುಗಳನ್ನೂ ತೆಗೆದುಕೊಂಡು ಮನೆಗೆ ಹಿಂತಿರುಗಿದ.





# ಎರಡು ಮಹಾ ವೃಕ್ಷಗಳು

ಪೂರ್ವಕಾಲದಲ್ಲಿ ಒಂದುಸಾರಿ ನಾರದಮುನಿ ಭೂಲೋಕ ಸಂಚಾರವನ್ನು ಮುಗಿಸಿಕೊಂಡು ಮಹಾವಿಷ್ಣುವಿನ ದರ್ಶನಮಾಡಲು ವೈಕುಂಠಕ್ಕೆ ಹೊರಟನು.

ಮಹಾವಿಷ್ಣು ನಾರದನನ್ನು ತುಂಬಾ ಆದರದಿಂದ ಸ್ವಾಗತಿಸಿ "ನಾರದ ನೀನು ಭೂಲೋಕ ಸಂಚಾರ ಮಾಡಿ ಬಂದಂತಿದೆ. ವಿಶೇಷಗಳೇನು? ಅಲ್ಲಿನ ಪ್ರಜೆಗಳು ಸರ್ವ ಸಂಪದಗಳಿಂದ ಸಂತೃಪ್ತರಾಗಿ ಸೌಖ್ಯದಿಂದ ಜೀವಿಸುತ್ತಿರುವರೇ? ಧನಿಕರಲ್ಲಿ ದಯೆ, ಧರ್ಮಗುಣಗಳೂ, ಬಡವರಲ್ಲಿ ನಿಯಮನಿಷ್ಠೆಗಳೂ ಜಾರಿಯಲ್ಲಿ ಇವೆಯೇ? ಏನು ವಿಶೇಷ?" ಎಂದು ಕೇಳಿದ.

ಅದಕ್ಕೆ ನಾರದನು ನಗುತ್ತಾ ತಲೆಯಾಡಿಸಿ "ದೇವಾ, ನಿಮ್ಮ ಪ್ರಶ್ನೆಗೆ ಪ್ರತ್ಯುತ್ತರ ಕೊಡಲು ಮನಸ್ಸು ಏಕೋ ಅಳುಕುತ್ತಿದೆ. ತಾವೇ ಸ್ವತಃ ಒಂದುಸಾರಿ ಭೂಲೋಕ ಸಂಚಾರ ಮಾಡುವುದು ಉತ್ತಮ" ಎಂದ.

"ನಾರದನ ಮಾತಿನಲ್ಲಿ ಏನೋ ವಿಶೇಷ ಇರಬೇಕು. ಆದರಿಂದಲೇ ನಾರದನು ನನ್ನನ್ನು ಭೂಲೋಕಸಂಚಾರ ಕೈಗೊಳ್ಳುವಂತೆ ಸಲಹೆ ಕೊಡುತ್ತಿದ್ದಾನೆ" ನೋಡೋಣ ಎಂದು ಅಂದುಕೊಂಡ ವಿಷ್ಣು.

ಮಹಾವಿಷ್ಣು ನಾರದನನ್ನು ಸಂಗಡ ಕರೆದುಕೊಂಡು ಭೂಲೋಕಸಂಚಾರ ಮಾಡಲು ಹೊರಟ. ಇಬ್ಬರೂ ಪ್ರವಾಸಿಗಳ ವೇಷದಲ್ಲಿ ಭೂಲೋಕವನ್ನು ತಲುಪಿದರು.

ಅವರಿಬ್ಬರೂ ಒಂದಾನೊಂದು ನಗರವನ್ನು ಸೇರಿ, ಅಲ್ಲಿ ಕಾಣಿಸಿದ ಒಂದು ದೊಡ್ಡ ಭವನದ ಹತ್ತಿರಕ್ಕೆ ಹೋದರು. ಭವನದ ಬಾಗಿಲು ಮುಚ್ಚಿತ್ತು. ನಾರದ ಮತ್ತು ಮಹಾವಿಷ್ಣು ಬಾಗಿಲ ಹತ್ತಿರಕ್ಕೆ ಹೋಗಿ "ಯಾರು ಸ್ವಾಮಿ ಒಳಗೆ" ಎಂದು ಕೂಗಿದರು. ಆದರೆ ಒಳಗಿನಿಂದ ಜವಾಬು ಬರಲಿಲ್ಲ.

ತರುವಾಯ ಇಬ್ಬರೂ ಮತ್ತೊಂದು ಮನೆಗೆ ಹೋದರು. ಆ ಮನೆಯ ಬಾಗಿಲು

ವ್ಯಾ. ಸರೋಜಾಬಾಯಿ

ಅಗಲವಾಗಿ ತೆರೆದಿತ್ತು. ಅವರು ಹೊಸ್ತಿಲ ಹತ್ತಿರ ಹೋಗಿನಿಂತು, "ನಾವು ಪ್ರಯಾಣಿಕರು. ಹಸಿವಾಗುತ್ತಿದೆ. ತುಸ ಅನ್ನ ನೀರು ಕೊಡುವಿರಾ?" ಎಂದು ಕೇಳಿದರು. ಅದಕ್ಕೆ ಆ ಮನೆಯವರು ಮುಖ ಸಿಂಡರಿಸಿಕೊಂಡು ಯಾವೊಂದು ಉತ್ತರವನ್ನೂ ಕೊಡದೆ ಧಡಾರನೆ ಬಾಗಿಲು ಮುಚ್ಚಿಕೊಂಡರು.

ಅವರ ವರ್ತನೆಯನ್ನು ನೋಡಿ ಮಹಾವಿಷ್ಣು ತುಂಬಾ ಖೇದಗೊಂಡನು. ನಾರದನು ಮಾತ್ರ ಮುಖವನ್ನು ಒಂದುಪಕ್ಕಕ್ಕೆ ತಿರುಗಿಸಿಕೊಂಡು ಮುಸಿಮುಸಿ ನಗುತ್ತಿದ್ದನು.

ಕೊಂಚ ಹೊತ್ತು ಇದೇ ರೀತಿಯಾಗಿ ಇಬ್ಬರೂ ಕೆಲವಾರು ಮನೆಗಳಿಗೆ ಹೋದರು. ಹೋದಲ್ಲೆಲ್ಲಾ ಆತಿಥ್ಯ ಬೇಡಿದರು.

"ನಿಮಗೆ ಆತಿಥ್ಯ ಬೇರೆಯೇ? ಒಂದು ಹಿಡಿ ಅನ್ನಸಹ ಹಾಕುವುದಿಲ್ಲ. ಹೋಗಿ, ಹೂಂ, ಇಲ್ಲಿಂದ ಹೊರಡಿ" ಎಂದು ಕಟುವಾಗಿ ನುಡಿದರು ಕೆಲವರು.

"ಕೆಲಸ ಮಾಡಿಕೊಂಡು ಜೀವಿಸದೆ, ಬಿಕ್ಕೆ ಬೇಡುವ ಕರ್ಮವೇನು ಬಂತು ನಿಮಗೆ? ಕೆಲಸಮಾಡಿ ಹೊಟ್ಟೆ ಹೊರೆದುಕೊಳ್ಳಿ" ಎಂದು ಮೂದಲಿಸಿದರು ಹಲವರು. ಕೊನೆಗೆ ವಿಷ್ಣು ಮತ್ತು ನಾರದರು ಒಂದು ಸಣ್ಣ ಗುಡಿಸಿಲಿನ ಹತ್ತಿರಕ್ಕೆ ಹೋದರು.

ಹೊರಗೆಯಾರೂ ಇರಲಿಲ್ಲ. ಗುಡಿಸಲಿನ ಮೇಲುಚಾವಣಿಯಮೇಲೆ ಹೀರೇಕಾಯಿಯ ಬಳ್ಳಿ ಬಹಳ ಒತ್ತಾಗಿ ಹಬ್ಬಿಕೊಂಡಿತ್ತು. ಇಬ್ಬರೂ ಬಾಗಿಲಿನ ಸಮೀಪಕ್ಕೆ ಬಂದು






"ಅಣ್ಣಾ, ಅಪ್ಪಾ" ಎಂದು ಕೂಗಿದರು. ಅವರ ಕಂಠಧ್ವನಿ ಕೇಳಿ ವೃದ್ಧನೊಬ್ಬನು ಹೊರಗೆ ತಲೆಹಾಕಿ ನೋಡಿದ. ಮರುಕ್ಷಣವೇ ನಸು ನಗುಸೂಸುತ್ತಾ ಹೊರಕ್ಕೆಬಂದು "ಬನ್ನೀಯಪ್ಪಾ, ಬನ್ನಿ. ನೀವು ಪ್ರಯಾಣಿಕರಂತೆ ತೋರುವುದು. ನಾವು ಬಡವರೇ ಆದರೂ ಇರುವುದರಲ್ಲಿ ನಿಮಗೆ ಆತಿಥ್ಯ ಕೊಡುವೆವು." ಎಂದು ತುಂಬಾ ಆದರದಿಂದಕರೆದ.

ನಾರದ ಮತ್ತು ಮಹಾವಿಷ್ಣು ಆ ವೃದ್ಧನ ಹಿಂದೆ ಗುಡಿಸಿಲಿನಲ್ಲಿ ಪ್ರವೇಶಿಸಿದರು. ಅಲ್ಲೊಬ್ಬ ವೃದ್ಧಳಿದ್ದಳು. ಅತಿಥಿಗಳನ್ನು ಕಂಡ ತಕ್ಷಣ ಆಕೆ ಬಂದು ಹರಿಯಹೋಗಿದ್ದ ಚಾಪೆಯನ್ನು ಹರಡಿ, ಅವರನ್ನು ಮಾತನಾಡಿಸಿದಳು.

"ಪ್ರಯಾಣದಿಂದ ತುಂಬಾ ಬಳಲಿದಂತಿದೆ. ಸ್ವಲ್ಪ ಸಹನೆ ತಂದುಕೊಂಡರೆ ಅಡಿಗೆ ಸಿದ್ಧ ಮಾಡುತ್ತೇನೆ. ಕೊಂಚ ಹೊತ್ತು ಕುಳಿತುಕೊಳ್ಳಿ" ಎಂದಳಾಕೆ.

ವೃದ್ಧನು ಆ ಗುಡಿಸಲಿನಮೂಲೆ ಯೊಂದರಲ್ಲಿದ್ದ ಮಡಿಕೆಯಿಂದ ಸ್ವಲ್ಪ ಅಕ್ಕಿಯನ್ನು ತಂದು ಮೊರದಲ್ಲಿ ಸುರಿದು ತನ್ನ ಹೆಂಡತಿಯ ಕೈಗೆ ಕೊಟ್ಟ. ಹೊರಗೆಹೋಗಿ ಕೆಲವು ಹೀರೇಕಾಯಿಗಳನ್ನು ಕಿತ್ತು ಹೆಂಡತಿಯ ಮುಂದಿಟ್ಟ. ತರುವಾಯ ಅತಿಥಿಗಳ ಹತ್ತಿರಕ್ಕೆ ಬಂದು. "ಅಡಿಗೆ ತುಸ ತಡವಾಗಬಹುದು. ಈ ಮಧ್ಯೆ ಅಲ್ಪಾಹಾರ ಮಾಡುವಿರಂತೆ. ಫಲಾಹಾರವೆಂದರೆ ಬೇರೇನೂ ಇಲ್ಲ, ನಮ್ಮ ಹಿತ್ತಲಲ್ಲಿ ಬೆಳೆದ ಸೌತೆಕಾಯಿ, ಹಿಂದಿಷ್ಟು ಹಸುವಿನ ಹಾಲು" ಎಂದು ಹಿಂದು ಸೌತೆಕಾಯಿಯನ್ನು ಎರಡು ತುಂಡುಮಾಡಿ, ವಿಷ್ಣು ಮತ್ತು ನಾರದರಿಗೆ ತಲಾ ಹಿಂದೊಂದು ತುಂಡನ್ನು ಕೊಟ್ಟನು. ಒಂದು ಮಡಿಕೆಯಲ್ಲಿದ್ದ ಹಾಲನ್ನು ಎರಡು ಸಣ್ಣ ಮಡಿಕೆಗಳಲ್ಲಿ ಸುರಿದು ಅವರ ಮುಂದಿಟ್ಟನು.

ಆ ವೃದ್ಧ ದಂಪತಿಗಳು ಬಡವರಾದರೂ ಸಹ ಅವರು ಮಾಡಿದ ಮರ್ಯಾದೆ ಮತ್ತು ಆತಿಥ್ಯವನ್ನು ಕಂಡು ಮಹಾವಿಷ್ಣು ಬಹಳ ಸಂತೋಷಪಟ್ಟನು. "ಪಾಪ, ನಿಮಗೆ ಮಕ್ಕಳುಮರಿ ಇಲ್ಲವೇ? ಈ ಇಳಿವಯಸ್ಸಿನಲ್ಲಿ ನಿಮ್ಮ ಪೋಷಣೆ ಭಾರವಹಿಸುವ ಬಂಧುಗಳಾರಾದರೂ ಇರುವರೇ?" ಎಂದು ಕೇಳಿದ



ಮಹಾವಿಷ್ಣು. ಅದಕ್ಕೆ ಆ ವೃದ್ಧನು ನಗುತ್ತಾ ಹೀಗೆಂದು ನುಡಿದ:

"ನಮಗೆ ಮಕ್ಕಳುಮರಿ ಯಿಲ್ಲ. ಬಂಧು ಬಳಗೆ ಮೊದಲೇ ಇಲ್ಲ. ನಮಗೆ ನಾವು ಹೊರತು ಈ ಪ್ರಪಂಚದಲ್ಲಿ ನಮ್ಮವರೆನಿಸಿ ಕೊಳ್ಳುವವರು ಯಾರೂ ಇಲ್ಲ."

ಅಷ್ಟರಲ್ಲಿ ಮಹಾವಿಷ್ಣು ತನ್ನಮುಂದಿಟ್ಟ ಮಡಿಕೆಯಿಂದ ಅರ್ಧಭಾಗ ಹಾಲನ್ನು ಕುಡಿದು ಮಡಿಕೆಯನ್ನು ಕೆಳಗೆ ಇಟ್ಟನು. ಆದರೆ ಅದು ಮೊದಲಿನಂತೆ ತುಂಬಿಕೊಂಡಿತು! ನಾರದನು ತನಗೆ ಕೊಟ್ಟಿದ್ದ ಸೌತೆಕಾಯಿಯನ್ನು ಸ್ವಲ್ಪ ಕಚ್ಚಿ ತಿಂದು ಉಳಿದುದನ್ನು ಕೈಯಲ್ಲೇ ಹಿಡಿದುಕೊಂಡಿದ್ದನು. ಅದೂ ಸಹ ಮೊದಲು ಆ ಮುದುಕನು ಕೊಟ್ಟಷ್ಟೇ ಇತ್ತು.

ಈ ಸೋಜಿಗವನ್ನು ನೋಡಿ ವೃದ್ಧನು ಆಶ್ಚರ್ಯಚಕಿತನಾದ. ಇವರು ಮಹಾಪುರುಷರೇ ಆಗಿರಬೇಕೆಂದು ಗ್ರಹಿಸಿದ. ತನ್ನ ಹೆಂಡತಿಯ ಹತ್ತಿರಕ್ಕೆ ಹೋಗಿ "ನೋಡಿದೆಯಾ, ಈ ವಿಚಿತ್ರವನ್ನು. ನಮ್ಮ ಮನೆಗೆ ಬಂದಿರುವ ಅತಿಥಿಗಳು ಸಾಮಾನ್ಯರಲ್ಲ. ನಾನು ಎಂಥ ವಿಚಿತ್ರ ನೋಡಿದೆ ಗೊತ್ತೇ?" ಎಂದು ತಾನು ಕಂಡ ವಿಚಿತ್ರವನ್ನು ಹೇಳಿದ. "ಆ ವಿಷಯ ಕೇಳಿ ವೃದ್ಧಳ ಆನಂದಕ್ಕೆ ಪಾರವೇ ಇಲ್ಲ. ಆಕೆ ಕೈಜೋಡಿಸಿಕೊಂಡು ಅತಿಥಿಗಳಿದ್ದ ಸ್ಥಳಕ್ಕೆ ಬಂದು ಅತ್ಯಂತ ವಿನಯದಿಂದ,

"ತಮ್ಮಗಳಿರಾ, ನೀವು ಯಾರೆಂದು ತಿಳಿಯಲು ನನ್ನಂತಹ ಅಜ್ಞಾನಿಗೆ ಸಾಧ್ಯವಿಲ್ಲ. ಆದರೆ ನೀವು ಮಹಾಪುರುಷರೆಂದು ಮಾತ್ರ ನಾನು ಬಲ್ಲೆ. ಈ ಬಡವರ ಮನೆಗೆ ಬಂದು ಪಾವನಗೊಳಿಸಿದುದಕ್ಕೆ ನಮ್ಮ ಅನಂತಾನಂತ ವಂದನೆಗಳು. ಅಜ್ಞಾನದಿಂದ, ಉಪಚಾರ ಮಾಡುವುದರಲ್ಲಿ ಏನಾದರೂ ದೋಷಗಳಿದ್ದರೆ ನಮ್ಮನ್ನು ಕ್ಷಮಿಸಬೇಕು" ಎಂದಳು.

ಅದಕ್ಕೆ ವಿಷ್ಣು "ಅಜ್ಜೀ, ನಿಮ್ಮ ಆದರಣೆಯಿಂದ ನಮಗೆ ತುಂಬಾ ಸಂತೋಷವಾಗಿದೆ. ಮಕ್ಕಳು, ಬಂಧುಬಳಗವಿಲ್ಲದಿದ್ದರೂ, ಒಂದಿಷ್ಟು ಸಿರಿ ಇದ್ದರೆ ತುಸವಾದರೂ ಸುಖ ಪಡುವಿರಿ. ನೀವಿಬ್ಬರೂ ನಮ್ಮೊಂದಿಗೆ ಗುಡಿಸಿಲಿನಾಚೆಗೆ ಬನ್ನಿ" ಎಂದ.

ವಿಷ್ಣು ಮತ್ತು ನಾರದರು ಗುಡಿಸಿಲಿನಿಂದ ಹೊರಗೆ ಬಂದರು. ಅವರ ಹಿಂದೆಯೇ ಆ

ವೃದ್ಧ ದಂಪತಿಗಳು ಹೊರಗೆಬಂದರು. ಅವರಿಗೆ ಭಯಾಶ್ಚರ್ಯ ವುಂಟಾಗುವ ದೃಶ್ಯವೊಂದು ಕಾಣಿಸಿತು. ಗುಡಿಸಿಲಿನ ಮುಂದೆ ಕಣ್ಣಿಗೆ ಕಾಣಿಸುವಷ್ಟುದೂರ ಒಂದು ವಿಶಾಲವಾದ ಮೈದಾನ. ಅದಕ್ಕೆ ಮೊದಲು ಅಲ್ಲಿದ್ದ ಭಾರಿಭಾರಿ ಭವನಗಳು ಒಂದೂ ಕಾಣ ಬರುತ್ತಿಲ್ಲ! ಎಲ್ಲ ಅದೃಶ್ಯವಾಗಿದ್ದವು.

"ಮಹಾನುಭಾವರೇ, ಇಲ್ಲಿದ್ದ ಸೌಧಗಳೂ ಮನೆಗಳೂ, ಹಾಡಮರಗಳೂ ಏನಾದವು?" ಎಂದು ಕೇಳಿದ ವೃದ್ಧ. ವಿಷ್ಣು ನಗುತ್ತ :

"ಅನೆಲ್ಲಾ ನೆಲ ಸಮವಾದವು. ಹಸಿವಿನ ಬಾಧೆಯಿಂದಾಗಲೀ, ಮಾರ್ಗಾಯಾಸದಿಂದಾಗಲೀ ಬಂದವರಿಗೆ ಒಂದು ತುತ್ತು ಅನ್ನ, ಕುಳಿತುಕೊಳ್ಳಲು ಸ್ವಲ್ಪ ಜಾಗ ಕೊಡಲಾರದ ಗೃಹಸ್ಥರು ನೆಲದಮೇಲಿದ್ದರೂ ಒಂದೇ, ನೆಲದೊಳಗೆ ಇದ್ದರೂ ಒಂದೇ! ಸರಿ, ನಿಮಗೆ ಕೋರಿಕೆಗಳೇನಾದರೂ ಇದ್ದರೆ ಹೇಳಿ" ಎಂದ.

"ನಾವು ವೃದ್ಧರಾದೆವು. ನಮಗಿರುವ ಕೋರಿಕೆ ಯೆಲ್ಲಾ ಒಂದೇಒಂದು. ನಮ್ಮಿಬ್ಬರಿಗೂ ಒಂದೇಸಾರಿ ಮರಣಪ್ರಾಪ್ತ ವಾಗಬೇಕು. ಅದುವರೆವಿಗೂ ಪೂಜೆಪುನಸ್ಕಾರ ಮಾಡಲು ಇಲ್ಲೊಂದು ದೇವಾಲಯ ಕಟ್ಟಿಸಿ ಕೊಟ್ಟರೆ ನಾವು ನಮ್ಮ ಜೀವನವನ್ನೆಲ್ಲಾ ಸುಖವಾಗಿ ಕಳೆಯುವೆವು" ಎಂದ ವೃದ್ಧ.

ಮರುಕ್ಷಣವೇ ಆ ಮೈದಾನದಲ್ಲಿ ಸುಂದರವಾದ ದೇವಾಲಯವೊಂದು ಉದ್ಭವಿಸಿತು. ವೃದ್ಧದಂಪತಿಗಳಿದ್ದ ಜೋಪಡಿ ದಿವ್ಯ ಭವನವಾಯಿತು. ಆಗ ಮಹಾವಿಷ್ಣು ಆ ದಂಪತಿಗಳಿಗೆ ಆಶೀರ್ವಾದಮಾಡಿ,

"ನಿಜವಾದ ಮಾನವರೆಂದರೆ ನೀವು. ನೀವು ಜೀವಿಸಿದಷ್ಟುಕಾಲ ಸುಖವಾಗಿಬಾಳಿ. ಆತರುವಾಯ ಈ ದೇವಾಲಯದ ಮುಂದೆ ಅರಳಿವೃಕ್ಷಗಳಾಗಿ ಚಿರಕಾಲ ನಿಲ್ಲುವಿರಿ" ಎಂದು ಹೇಳಿ ನಾರದನೊಂದಿಗೆ ಅದೃಶ್ಯನಾದ.

ಆ ದಂಪತಿಗಳು ಆ ದೇವಾಲಯ ಪೂಜಾರಿಗಳಾಗಿದ್ದುಕೊಂಡು ಅನೇಕವರ್ಷ ಜೀವಿಸಿದರು. ಮರಣಾನಂತರ ಆ ಆಲಯದ ಎದುರಿನಲ್ಲಿ ಎರಡು ಅರಳಿವೃಕ್ಷಗಳಾಗಿ ಬೆಳೆದರು.






# ದುರ್ಜನರ ಸ್ನೇಹ

ಒಂದು ಊರಿನಲ್ಲಿ ಒಬ್ಬ ಸನ್ಯಾಸಿ ಇದ್ದನು. ಆತನು ಊರಿನ ಕೊನೆಯಲ್ಲಿ ಕುಟೀರ ವನ್ನೊಂದು ಕಟ್ಟಿಕೊಂಡು ವಾಸಮಾಡು ತ್ತಿದ್ದನು. ಭಕ್ತರು ಕೆಲವರು ಆತನಿಗೆ ನಿತ್ಯವೂ ಹಣ್ಣುಹಂಪಲು, ತಿಂಡಿತೀರ್ಥಗಳನ್ನು ತಂದು ಕೊಡುತ್ತಿದ್ದರು. ಅವುಗಳಿಂದಲೇ ಆತನು ಜೀವಿಸುತ್ತಿದ್ದನು. ಎಂದಾದರೂ ಒಂದುದಿನ ಯಾರೂ ಬರದಿದ್ದರೆ ಅಂದು ಸನ್ಯಾಸಿ ಉಪ ವಾಸಮಾಡುತ್ತಿದ್ದನೇ ಹೊರತು ಊಟವಿಲ್ಲ ವಲ್ಲಾ ಎಂದು ಚಿಂತೆಪಡುತ್ತಿರಲಿಲ್ಲ. ಸನ್ಯಾಸಿ ಆಗಾಗ್ಗೆ ಉಪವಾಸವಿರುವುದನ್ನು ತಿಳಿದು ಭಕ್ತನೋರ್ವನು ಆತನಿಗೆ ಒಂದು ಹಸು ವನ್ನು ಕಾಣಿಕೆಯಾಗಿ ಒಪ್ಪಿಸಿದನು. ಹಸು ಕುಟೀರದಲ್ಲೇ ಇದ್ದುಕೊಂಡು ಸನ್ಯಾಸಿಗೆ ಸಾಕಾಗುವಷ್ಟು ಹಾಲನ್ನು ಕೊಡುತಿತ್ತು.

ಸನ್ಯಾಸಿಯ ಕುಟೀರದಲ್ಲಿದ್ದ ಹಸುವನ್ನು ಕದಿಯಬೇಕೆಂದು ಒಬ್ಬ ಕಳ್ಳನಿಗೆ ಮನಸ್ಸಾ ಯಿತು. ಅದೇನಷ್ಟು ಕಷ್ಟಕರವಾದ ಕಾರ್ಯ ವಲ್ಲ. ಗುಡಿಸಲು ಊರಿನ ಅಂಚಿನಲ್ಲಿದೆ. ಅಲ್ಲಿ ಯಾರೂ ಕಾವಲಿರುವುದಿಲ್ಲ. ಕುಟೀರದ ಬಾಗಿಲಿಗೆ ಅಗಳಿಸಹ ಇಲ್ಲ. ಸನ್ಯಾಸಿ ನಿದ್ದೆ ಹೋಗುತ್ತಿರುವಾಗ ಮೆಲ್ಲನೆ ಒಳಗೆ ನುಗ್ಗಿ ಹಸುವನ್ನು ಅನಾಯಾಸವಾಗಿ ಅಟ್ಟಿಕೊಂಡು ಹೋಗಬಹುದು. ಆದುದರಿಂದ ಒಂದು ದಿನ ರಾತ್ರಿ ಆ ಕಳ್ಳನು ಸನ್ಯಾಸಿಯ ಕುಟೀರದ ಕಡೆಗೆ ಹೊರಟನು.

ದಾರಿಯಲ್ಲಿ ಆ ಕಳ್ಳನಿಗೆ ಒಬ್ಬಾತ ಸಿಕ್ಕಿದ. ಆತನೂಸಹ ಆ ಕಳ್ಳನೊಂದಿಗೆ ನಡೆಯುತ್ತಿದ್ದ.

"ಯಾರು ನೀನು? ನನ್ನ ಸಂಗಡ ಏಕೆ ಬರುತ್ತಿರುವೆ? ನಾನು ಕಾರ್ಯಾರ್ಥವಾಗಿ ಹೋಗುತ್ತಿದ್ದೇನೆ! ನಿನ್ನ ದಾರಿಯಲ್ಲಿ ನೀನು ಹೋಗು" ಎಂದ ಕಳ್ಳ.

ಅದಕ್ಕೆ ಎರಡನೇಯಾತ "ನಾನು ಭೂತ. ಊರಂಚಿನಲ್ಲಿರುವ ಕುಟೀರದಲ್ಲಿ ಒಬ್ಬ ಸನ್ಯಾಸಿ ಇದ್ದಾನೆ. ಅವನನ್ನು ಕೊಲ್ಲಲು ಹೋಗುತ್ತಿದ್ದೇನೆ. ಈ ಸನ್ಯಾಸಿ ನಿಮ್ಮ

ಎಲ್. ರಾಮದಾಸ

ಊರಿಗೆ ಬಂದಲಾಗಯ್ತು ಜನರೆಲ್ಲಾ ಸುಗುಣಿಗಳಾಗುತ್ತಿರುವರು. ಅದರಿಂದಾಗಿ ನನ್ನ ಚಟುವಟಿಕೆ ಮೂಲೆ ಪಾಲಾಯಿತು. ಊರಲ್ಲಿ ಅನ್ಯಾಯ, ಅಕ್ರಮ, ದೌರ್ಜನ್ಯಗಳು ಹೇಳ ಹೆಸರಿಲ್ಲದಾಯಿತು! ಆದುದರಿಂದ ಈ ಸನ್ಯಾಸಿಯನ್ನು ಕೊಂದು ಊರಲ್ಲಿ ಮತ್ತೆ ನನ್ನ ಅಧಿಕಾರ ಚಲಾಯಿಸುವೆನು. ನಿನ್ನ ಪ್ರಯಾಣ ಎತ್ತ ಕಡೆ?" ಎಂದು ಕೇಳಿದ.

ಕಳ್ಳ ತನ್ನ ಉದ್ದೇಶ ತಿಳಿಸಿದ. ಇಬ್ಬರೂ ಸನ್ಯಾಸಿಗೆ ಹಾನಿಮಾಡಲು ಒಂದೇ ಸ್ಥಳಕ್ಕೆ ಹೋಗುತ್ತಿದ್ದರಾದುದರಿಂದ ಅವರಲ್ಲಿ ಗೆಳೆತನ ಬೆಳೆಯಿತು. ಸ್ನೇಹಿತರಂತೆ ಒಬ್ಬರಕೈ ಒಬ್ಬರು ಹಿಡಿದುಕೊಂಡು, ಅವರು ಅರ್ಧರಾತ್ರಿವೇಳೆಗೆ ಕುಟೀರವನ್ನು ತಲುಪಿದರು. ಎಲ್ಲೂ ಸದ್ದು ಸಪ್ಪಳವಿಲ್ಲ. ಸನ್ಯಾಸಿ ಸುಖವಾಗಿ ಕುಟೀರದಲ್ಲಿ ನಿದ್ದೆಮಾಡುತ್ತಿದ್ದಾನೆ.

ಕಳ್ಳ ಮನಸ್ಸಿನಲ್ಲಿ ಈ ರೀತಿ ಯೋಚಿಸಿದ: "ಮೊದಲು ಈ ಭೂತ ಸನ್ಯಾಸಿಯನ್ನು ಕೊಲ್ಲುವಪಕ್ಷಕ್ಕೆ ಸನ್ಯಾಸಿ ಅರಚಿ ಗಲಭೆ ಎಬ್ಬಿಸಿದರೆ ಜನ ಬಂದು ಸೇರುವರು. ಆತರುವಾಯ ನಾನು ಹಸುವನ್ನು ಕಳವುಮಾಡಲು ಸಾಧ್ಯವಾಗದವಿಷಯ. ಆದುದರಿಂದ ನಾನೇ ಮೊದಲು ನನ್ನ ಕೆಲಸ ಮುಗಿಸುವೆನು." ಅದೇ ಸಮಯದಲ್ಲಿ ಭೂತ ಹೀಗೆ ಆಲೋಚಿಸಿತು. "ಈ ಕಳ್ಳ ಮೊದಲು ಹಸುವನ್ನು ಕಳವುಮಾಡಲು ಪ್ರಯತ್ನಿಸಿದರೆ ಅದು ಅರಚ



ಬಹುದು. ಸನ್ಯಾಸಿ ಸದ್ದುಕೇಳಿ ನಿದ್ದೆಯಿಂದ ಎಚ್ಚೆತ್ತು ಕೂಗಬಹುದು. ಜನ ಬಂದು ಸೇರು ತ್ತಾರೆ. ಆಗ ನಾನು ಸನ್ಯಾಸಿಯನ್ನು ಕೊಲ್ಲು ವುದು ಅಸಾಧ್ಯವಾಗುತ್ತದೆ."

ಭೂತ ಹೀಗೆಂದು ಯೋಚಿಸಿ, ಬಹು ವಿನಯದಿಂದ ಕಳ್ಳನಿಗೆ ಹೇಳಿತು: "ತಮ್ಮಾ, ಮೊದಲು ನಾನು ಸನ್ಯಾಸಿಯನ್ನು ಕೊಂದು ಬಿಡುವೆನು. ಬಳಿಕ ನೀನು ನಿಶ್ಚಿಂತೆಯಾಗಿ ಹಸುವನ್ನು ಹೊಡೆದುಕೊಂಡು ಹೋಗು. ನಿನ್ನನ್ನು ಅಡ್ಡಿಮಾಡುವವರೇ ಇಲ್ಲ."

ಅದಕ್ಕೆ ಕಳ್ಳನೆಂದ 'ಹಾಗಲ್ಲ, ಅಣ್ಣಾ. ಮೊದಲು ನಾನು ಸ್ವಲ್ಪವಾದರೂ ಸಪ್ಪಳಾಗ ದಂತೆ ಹಸುವನ್ನು ಅಟ್ಟಿಕೊಂಡು ಹೋಗು ವೆನು. ಆಮೇಲೆ ಸನ್ಯಾಸಿಯನ್ನು ನೀನು ಕೊಲ್ಲಬಹುದು. ನನ್ನದು ಕ್ಷಣ ಹೊತ್ತಿನ ಕೆಲಸ. ಸಣ್ಣಕಾರ್ಯ"

ಇಬ್ಬರೂ ವಾದಿಸಲು ಪ್ರಾರಂಭಿಸಿದರು. ವಾದದಿಂದ ಹೊಡೆದಾಟಕ್ಕೆ ಮೊದ ಲಾಯಿತು. ಮೊದಲು ಪಿಸುಗುಟ್ಟುತ್ತಿದ್ದವರು ಕ್ರಮೇಣ ಗಂಟಲು ದೊಡ್ಡದುಮಾಡಿ ಕಿರಿ ಚಾಡಲು ಪ್ರಾರಂಭಿಸಿದರು. ಈ ವಿವಾದ ಕೊನೆಗೆ ರಂಭಾಟಕ್ಕೆ ಇಳಿಯಿತು.

ಕೊನೆಗೆ ಕಳ್ಳನು ಗಟ್ಟಿಯಾಗಿ "ಅಯ್ಯಾ ಸನ್ಯಾಸಿ, ಇದೋ ನೋಡು, ನಿನ್ನನ್ನು ಕೊಲ್ಲಲು ಭೂತ ಬಂದಿದೆ," ಎಂದು ಅರಚಿದ.

ಭೂತಕ್ಕೆ ಕೋಪ ಮಿತಿಮೀರಿತು. ಅದು ಇನ್ನಷ್ಟು ಗಟ್ಟಿಯಾಗಿ "ನೋಡಯ್ಯಾ, ಸನ್ಯಾಸೀ, ಕಳ್ಳ ಬಂದಿದ್ದಾನೆ. ನಿನ್ನ ಹಸು ವನ್ನು ಅಪಹರಿಸಲು" ಎಂದಿತು.

ಈ ಗಲಭೆಗೆ ಸನ್ಯಾಸಿ ಮಾತ್ರವೇ ಅಲ್ಲ, ನೆರೆಹೊರೆಯವರೂ ಸಹ ದೊಣ್ಣೆ, ಕತ್ತಿ ಮುಂತಾದ ಆಯುಧಗಳೊಂದಿಗೆ ಅಲ್ಲಿಗೆ ಓಡಿ ಬಂದರು. ಹಾಗೆ ಬಂದವರಲ್ಲಿ ಕೆಲವರು ಕಳ್ಳ ನನ್ನು ಹಿಡಿದುಕೊಂಡರು. ಭೂತವೈದ್ಯ ನೊಬ್ಬನು ಭೂತವನ್ನು ಅಲ್ಲಿಯೇ ಬಂಧಿಸಿ ಮಾರಣ ಹೋಮ ಮಾಡಿದನು.

ದುರ್ಜನರ ನಡುವೆ ಏರ್ಪಡುವ ಸ್ನೇಹ ಬಹಳಕಾಲ ಉಳಿಯುವುದಿಲ್ಲ.






ಧಾರಾನಗರದಲ್ಲಿ ಒಬ್ಬ ಕಳ್ಳನಿದ್ದ. ಅವನು ಕಳ್ಳತನ ಮಾಡುವುದರಲ್ಲಿ ಸಿದ್ಧಹಸ್ತ. ಅನೇಕ ಧನಿಕರ ಮನೆಗಳಿಗೆ ಕನ್ನಹಾಕಿ ಕೊಳ್ಳೆ ಹೊಡೆದಿದ್ದ. ಆದರೆ ಅವನನ್ನು ಯಾರಿಂದಲೂ ಸೆರೆಹಿಡಿಯಲಾಗಲಿಲ್ಲ. ಅವನಿಗೆ ಪ್ರಜೆಗಳು ರಾತ್ರಿಚುಕ್ಕಿ ಎಂದು ಹೆಸರಿಟ್ಟಿದ್ದರು. ಆದರೆ ಈ ರಾತ್ರಿಚುಕ್ಕಿ ಯಾರೋ, ಹೇಗಿರುವನೋ, ಎಲ್ಲಿ ವಾಸಿಸುತ್ತಿರುವನೋ ಯಾರೂ ಅರಿಯರು. ಅವನನ್ನು ಹಿಡಿಯಲು ರಾಜನು ಮಾಡಿದ ಪ್ರಯತ್ನಗಳೆಲ್ಲಾ ವಿಫಲವಾದುವು.

ರಾತ್ರಿಚುಕ್ಕಿಗೆ ಒಬ್ಬ ಮಗನಿದ್ದನು. ಕಳ್ಳತನ ಮಾಡುವುದರಲ್ಲಿ ಅವನು ಅಪ್ಪನನ್ನು ಮೀರಿಸಿದ್ದ. ಮಗನು ತನಗಿಂತಲೂ ಯುಕ್ತಿವಂತನೆಂದು ತಿಳಿದು ರಾತ್ರಿಚುಕ್ಕಿ ಅವನಿಗೆ ಹಗಲುಚುಕ್ಕಿ ಎಂದು ನಾಮಕರಣಮಾಡಿದ. ಹಗಲುಚುಕ್ಕಿಗೆ ಹದಿನಾರು ವರುಷ ತುಂಬಿದ ಕೂಡಲೇ ತಂದೆ ಮಕ್ಕಳಿಬ್ಬರೂ ಒಟ್ಟಾಗಿ ಕಳ್ಳತನ ಮಾಡಲು ಹೋಗುತ್ತಿದ್ದರು. ರಾತ್ರಿಚುಕ್ಕಿ ಮುದಕನಾಗುತ್ತಿದ್ದುದರಿಂದ ಅವನಿಗೆ ಹಗಲುಚುಕ್ಕಿಯ ಸಹಾಯ ಅಗತ್ಯವಾಗಿತ್ತು.

ಒಂದು ದಿನ ರಾತ್ರಿ ತಂದೆಮಕ್ಕಳಿಬ್ಬರೂ ಒಟ್ಟಾಗಿ ರಾಜನ ಖಜಾನೆಗೆ ಕನ್ನಹಾಕಿದರು. ಕನ್ನದ ಹೊರಗೆ ಹಗಲುಚುಕ್ಕಿ ನಿಂತುಕೊಂಡಿದ್ದ. ರಾತ್ರಿಚುಕ್ಕಿ ಕನ್ನದಿಂದ ಖಜಾನೆಗೆ ಹೋಗಿ ಸ್ವಲ್ಪ ಹಣ ಮತ್ತು ಆಭರಣಗಳನ್ನು ಮಗನಿಗೆ ತಂದು ಕೊಟ್ಟು ಮತ್ತೆ ಒಳಕ್ಕೆ ನುಗ್ಗಿದ. ಈಸಾರಿ ರಾತ್ರಿಚುಕ್ಕಿಯ ಕೈಯಿಂದ ಏನೋ ಕೆಳಗೆ ಬಿದ್ದು ಶಬ್ದವಾಯಿತು. ಈ ಶಬ್ದವನ್ನು ಕೇಳಿ ಖಜಾನೆ ಕಾವಲಿದ್ದ ಭಟರು ಓಡಿಬಂದು, ಆಗಲೇ ಕನ್ನದಲ್ಲಿ ತಲೆ ತೂರಿಸಿದ್ದ ರಾತ್ರಿಚುಕ್ಕಿಯ ಕುತ್ತಿಗೆಯನ್ನು ಕಡಿದುಬಿಟ್ಟರು. ಆ ಕೂಡಲೆ ರಾತ್ರಿಚುಕ್ಕಿಯ ತಲೆ ಹೊರಗೆ, ಮುಂಡ ಒಳಗೆ ತುಂಡಾಗಿಬಿದ್ದವು. ಕನ್ನದ ಹೊರಗೆ ನಿಂತಿದ್ದ ಹಗಲುಚುಕ್ಕಿ ತಂದೆಯ ತಲೆಯನ್ನು ತೆಗೆದುಕೊಂಡು ಮನೆಗೆ ಓಡಿದ.

ಎನ್. ಮಾಧವರಾವ್



ವಿಷಾದವಾರ್ತೆಯನ್ನು ತಾಯಿಗೆ ತಿಳಿಸಿದ. ಆಕೆ ಬಹಳ ವಿಲಪಿಸಿದಳು. ಗಟ್ಟಿಯಾಗಿ ಇತರರಿಗೆ ತಿಳಿಯುವಂತೆ ಅಳಕೂಡದೆಂತಲೂ, ಹಾಗೆ ಅತ್ತರೆ ತಮ್ಮ ಗುಟ್ಟು ಹೊರಬೀಳುವುದೆಂತಲೂ ಹಗಲುಚುಕ್ಕಿ ತಾಯಿಗೆ ತಿಳಿಸಿದ.

ಮಾರನೇಯ ದಿವಸ ಹಗಲುಚುಕ್ಕಿ ಭರ್ಜರಿಪೋಷಾಕನ್ನು ಧರಿಸಿಕೊಂಡು ರಾಜಸಭೆಗೆ ಹೋದ. ಅಲ್ಲಿ ರಾತ್ರಿ ನಡೆದ ಕಳ್ಳತನದ ವಿಷಯವಾಗಿ ಚರ್ಚೆ ನಡೆಯುತಿತ್ತು. ತಲೆ ಕಾಣಿಸದಿದ್ದುದರಿಂದ ಸತ್ತುಹೋದ ಆಸಾಮಿ ಯಾರೆಂದು ಪತ್ತೆಯಾಗಲಿಲ್ಲ. ಆದರೆ ಸ್ವಲ್ಪ ಹಣ ಕಳುವಾಗಿದ್ದುದರಿಂದಲೂ, ಕಳ್ಳನ ರುಂಡ ಕಾಣೆಯಾಗಿರುವುದರಿಂದಲೂ ಕಳ್ಳತನ ನಡೆದಾಗ ಮತ್ತೊಬ್ಬ ಕಳ್ಳನು ಇದ್ದಿರಲೇಬೇಕೆಂದು ರಾಜನು ಗ್ರಹಿಸಿದನು. ಸತ್ತುಹೋದ ಕಳ್ಳನ ಮುಂಡವನ್ನು ಗಾಡಿಯಲ್ಲಿಟ್ಟು ಎಲ್ಲ ಬೀದಿಗಳಲ್ಲೂ ಮೆರವಣಿಗೆ ಮಾಡಿಸಬೇಕೆಂತಲೂ, ಅದನ್ನು ಕಂಡು ಯಾರಾದರೂ ಶೋಕಿಸಿದರೆ ಅವರನ್ನು ಹಿಡಿದುತರಬೇಕೆಂತಲೂ ರಾಜನು ತನ್ನ ಭಟರಿಗೆ ಆಜ್ಞೆಮಾಡಿದ. ಇದೆಲ್ಲವನ್ನೂ ಕೇಳಿ ಹಗಲುಚುಕ್ಕಿ ಮನೆಗೆ ಹಿಂದಿರುಗಿದ.

"ಅಮ್ಮಾ, ನಾಳೆ ಅಪ್ಪನ ಶರೀರವನ್ನು ನಮ್ಮ ಬೀದಿಗೆ ತರುತ್ತಾರೆ. ಅದನ್ನು ನೋಡಿ ನೀನು ಅಳಲು ಪ್ರಾರಂಭಿಸಿದೆಯೆಂದರೆ ನಾವು ಹಾಳಾದಂತೆಯೇ ಸರಿ" ಎಂದ ಹಗಲುಚುಕ್ಕಿ ತಾಯಿಯೊಂದಿಗೆ. ಆದಕ್ಕೆ ಆಕೆ:

"ಮಗು, ನಿನ್ನ ತಂದೆಯನ್ನು ನೋಡದೆ ಹೇಗಿರಲಿ? ನೋಡಿದರೆ ಅಳು ಬರದಿರುತ್ತದೆಯೇ? ನೀನೇ ಹೇಳು" ಎಂದಳು ಅತೀವ ವೇದನೆಯಿಂದ.

ತಾಯಿಯ ಮನಸ್ಥಿತಿಯನ್ನು ಗ್ರಹಿಸಿ ಹಗಲುಚುಕ್ಕಿ ಒಂದು ಉಪಾಯ ಹೂಡಿದ. ತಾಯಿ ಮಕ್ಕಳಿಬ್ಬರೂ ಬಹಳ ಬಡವರಂತೆ ವೇಷಮರೆಯಿಸಿಕೊಂಡು ಬೇರೊಂದು ಬೀದಿಗೆ ಹೋದರು. ಅಲ್ಲಿ ಹಗಲುಚುಕ್ಕಿ ಒಂದು ನುಗ್ಗೇಮರವನ್ನು ಹತ್ತಿ ಕಾಯಿಗಳನ್ನು ಕೀಳುತ್ತಿರುವಂತೆ ನಟಿಸುತ್ತಿದ್ದ. ರಾತ್ರಿಚುಕ್ಕಿಯ ಶರೀರವಿದ್ದ ಗಾಡಿ ಆ ಬೀದಿಗೆ ಬರುವ ಸಮಯಕ್ಕೆ ಸರಿಯಾಗಿ ಆವನ ಹೆಂಡತಿಗೆ ದುಃಖ ಉಮ್ಮಳಿಸಿ ಬಂತು. ಅದೇ ಸಮಯಕ್ಕೆ

ಹಗಲುಚುಕ್ಕಿ ಮರದಮೇಲಿಂದ ಕೆಳಗೆ ಬಿದ್ದು ಬಿಟ್ಟ. ಆ ದುಃಖದಲ್ಲಿ ತಾಯಿ ಹಗಲು ಚುಕ್ಕಿಯಮೇಲೆ ಬಿದ್ದು "ಅಯ್ಯೋ ಮಗನೇ, ಮೊದಲೇ ತಂದೆಯಿಲ್ಲದ ಹುಡುಗನಾದೆ. ಈಗ ನಿನಗೇನುಬಂತೋ ಕರ್ಮ" ಎಂದು ಅತ್ತಳು.

ರಾಜಭಟರು ಆಕೆಯನ್ನು ಸಮಾಧಾನ ಮಾಡಿ, ಗಾಡಿಯನ್ನು ಮುಂದಕ್ಕೆ ಹೊಡೆದು ಕೊಂಡು ಹೋದರು. ಎಲ್ಲ ಬೀದಿಗಳಲ್ಲೂ ಶವದ ಮೆರವಣಿಗೆ ನಡೆಯಿತು.

ಮಾರನೇಯ ದಿನ ರಾಜಸಭೆಗೆ ಹಗಲು ಚುಕ್ಕಿ ಹೋದ ದೊಡ್ಡ ಸಭ್ಯನಂತೆ.

ರಾಜನು ಭಟರನ್ನು ಕರೆದು "ಕಳ್ಳನ ಶವ ವನ್ನು ಕಂಡು ಯಾರಾದರೂ ಅತ್ತರೇನು?" ಎಂದು ಕೇಳಿದ. "ಇಲ್ಲ ಪ್ರಭೂ, ಒಬ್ಬ ಬಿಕ್ಷು ಕಳು ಮಾತ್ರ ಅಳುವುದನ್ನು ನೋಡಿದೆವು. ಆಕೆ ತನ್ನ ಮಗನು ಮರದಮೇಲಿಂದ ಬಿದ್ದು ಹೋದುದಕ್ಕೆ ಅಳುತ್ತಿದ್ದಳು" ಎಂದು ಉತ್ತರ ಕೊಟ್ಟರು ಆ ಭಟರು.

ಹಾಗೆ ಅತ್ತಾಕೆಯೂ, ರಾಜಭಟರು ಹೋಗುವ ಸಮಯಕ್ಕೆ ಸರಿಯಾಗಿ ಮರದ ಮೇಲಿಂದ ಬಿದ್ದ ಯುವಕನೂ, ಕಳ್ಳನ ಸಂಬಂಧೀಕರಿರಬಹುದೆಂಬ ಅನುಮಾನ ವುಂಟಾಯಿತು ರಾಜನಿಗೆ. ಆದರೆ ಅವರು ಕೈಮೀರಿ ಪಾರಾಗಿರುವರು. ಆದುದರಿಂದ ಅರಸನು ರಾಜಭಟರಿಗೆ ಮತ್ತೊಂದು ಆಜ್ಞೆ ಯನ್ನು ಜಾರಿಮಾಡಿದ.

"ಇಂದು ರಾತ್ರಿ ಕಳ್ಳನ ಕಳೇಬರವನ್ನು ದಹನಮಾಡಿ. ಆದರೆ ಹುಷಾರ್. ಮರದ






ಮೇಲಿಂದ ಬಿದ್ದ ಯುವಕನು ತನ್ನ ತಂದೆಯ ತಲೆಯನ್ನು ಚಿತೆಯಲ್ಲಿ ಹಾಕಲೋಸುಗ ತಪ್ಪದೆ ಬರುತ್ತಾನೆ. ಆಗ ಅವನನ್ನು ಹಿಡಿದು ಕೊಳ್ಳಿ" ಎಂದು ಎಚ್ಚರಿಕೆಕೊಟ್ಟ.

ರಾಜನ ಆಜ್ಞೆಯಂತೆ ಅಂದು ರಾತ್ರಿ ಭಟರು ಕಳ್ಳನ ಕಳೇಬರವನ್ನು ಶ್ಮಶಾನಕ್ಕೆ ತೆಗೆದುಕೊಂಡು ಹೋಗಿ ಚಿತೆಯಮೇಲಿಟ್ಟು ದಹನ ಮಾಡಲು ಸಿದ್ಧರಾದರು. ಆ ಸಮಯಕ್ಕೆ ಸರಿಯಾಗಿ ಹಗಲುಚುಕ್ಕಿ ಮುಖಕ್ಕೆ ಬೂದಿ ಬಳಿದುಕೊಂಡು, ಜುಟ್ಟು ಕೆದರಿಕೊಂಡು, ಕೊರಳಲ್ಲಿ ಕವಡೆಯ ಹಾರವನ್ನು ಹಾಕಿಕೊಂಡು, ಕಾಲಿಗೆ ಗೆಜ್ಜೆ ಕಟ್ಟಿಕೊಂಡು, ಒಂದು ಕೈಯಲ್ಲಿ ಕತ್ತಿ ಮತ್ತೊಂದರಲ್ಲಿ ದೀವಟಿಗೆಯನ್ನು ಹಿಡಿದುಕೊಂಡು, ತಂದೆಯ



ಶಿರಸ್ಸನ್ನು ಮೂಟೆಕಟ್ಟಿ ಭುಜದಮೇಲೆ ಹಾಕಿಕೊಂಡು ಭೀಕರವಾಗಿ ಅರಚಿಕೊಂಡು ಓಡುತ್ತಾ ಅಲ್ಲಿಗೆ ಧಾವಿಸಿಬಂದ. ಆ ಭೀಕರಾಕೃತಿಯನ್ನು ಕಂಡು ಭೂತವಿರಬೇಕೆಂದು ರಾಜಭಟರು ಬೆದರಿ ಅಲ್ಲಿಂದ ಪಲಾಯನ ಮಾಡಿದರು. ಆಗ ಹಗಲುಚುಕ್ಕಿ ಚಿತಿಯ ಸುತ್ತಲೂ ಪ್ರದಕ್ಷಿಣೆಮಾಡಿ ತಂದೆಯ ತಲೆಯನ್ನು ಚಿತಿಯಲ್ಲಿ ಹಾಕಿ, ತನ್ನ ದಾರಿ ಹಿಡಿದು ಹೋಗಿಬಿಟ್ಟ.

ಆ ರಾತ್ರಿ ನಡೆದ ವಿಷಯವನ್ನು ಕೇಳಿ ರಾಜನು ಕಳ್ಳನ ಪುತ್ರನ ಸಾಹಸಕ್ಕೆ ಆಶ್ಚರ್ಯಗೊಂಡನು. ಆತನು ತನ್ನ ಭಟರೊಂದಿಗೆ ಈಸಾರಿ ಈ ರೀತಿ ಹೇಳಿದ:

"ಅವನು ಸತ್ತುಹೋದ ಕಳ್ಳನ ಕುಮಾರನೇ ಆಗಿರಬೇಕು. ಮತ್ತೆ ಅವನು ನಿಮ್ಮನ್ನು ಮೋಸಗೊಳಿಸಿರುವನು. ಅವನು ಚಿತಿಯಲ್ಲಿ ಹಾಲೆರಯಲು ನಾಳೆ ತಪ್ಪದೇ ಬಂದೇತೀರುತ್ತಾನೆ. ಆದುದರಿಂದ ಈಸಾರಿಯಾದರೂ ಮೋಸಹೋಗದೆ ಅವನನ್ನು ಹಿಡಿಯಿರಿ."

ಮಾರನೇಯ ದಿನ ಶ್ಮಶಾನದಲ್ಲಿ ಕಾವಲು ಕಾಯುತ್ತಿದ್ದ ರಾಜಭಟರು ಒಬ್ಬ ಗೊಲ್ಲರ ಹುಡುಗನನ್ನು ನೋಡಿದರು. ಅವನು ತಲೆಯ ಮೇಲೆ ಹಾಲಿನ ಮಡಿಕೆಗಳನ್ನು ಒಂದರ ಮೇಲೊಂದು ಜೋಡಿಸಿಕೊಂಡು ಶ್ಮಶಾನ ಮಾರ್ಗವಾಗಿ ನಗರದಕಡೆ ಬರುತ್ತಿದ್ದ.

ಅವನನ್ನು ಪುಸಲಾವಣೆ ಮಾಡಿ ಹಾಲು ಕುಡಿಯಬೇಕೆಂದು ರಾಜಭಟರು ಹಂಚಿಕೆ





ಹೂಡಿದರು. ಆದರೆ ಆ ಹುಡುಗ ಅವರಿಗೆ ಒಂದು ತೊಟ್ಟು ಹಾಲಾದರೂ ಕೊಡಲಿಲ್ಲ. ರಾಜಭಟರು ಅವನನ್ನು ಭಯಪಡಿಸಿದರು. ಅವರಿಂದ ತಪ್ಪಿಸಿಕೊಳ್ಳಲು ಆ ಹುಡುಗನು ಚಿತಿಯ ಕಡೆ ಓಡಿದ. ಆಗ ಅವನ ತಲೆಯ ಮೇಲಿದ್ದ ಹಾಲಿನ ಮಡಿಕೆಗಳು ಚಿತೆಯ ಮೇಲೆ ಬಿದ್ದು ಒಡೆದುಹೋದವು.

"ತಾಳಿ, ತಾಳಿ. ಅರಸರ ಹತ್ತಿರಕ್ಕೆ ಹೋಗಿ ಫಿರ್ಯಾದು ಮಾಡುತ್ತೇನೆ" ಎಂದು ಆ ಹುಡುಗ ಅಲ್ಲಿಂದ ಕಾಲು ತೆಗೆದ. ಅವನು ರಾಜನನ್ನು ನೋಡುವುದಕ್ಕೆ ಮೊದಲೇ ಭಟರು ರಾಜನ ಹತ್ತಿರಕ್ಕೆ ಓಡಿಹೋಗಿ ತಾವು ಯಾವ ಪಾಪವನ್ನೂ ಕಂಡರಿಯೆವೆಂತಲೂ, ತಮ್ಮಮೇಲೆ ಸುಳ್ಳು ಆರೋಪಣೆ ಮಾಡಲು ಒಬ್ಬ ಗೊಲ್ಲರ ಹುಡುಗನು ಬರುವನಂತೆಲೂ ಬಿನ್ನವಿಸಿಕೊಂಡರು.

ನಡೆದುದೆಲ್ಲವನ್ನೂ ಕೇಳಿದ ತರುವಾಯ ಆ ಕಳ್ಳನ ಪುತ್ರನು ಮತ್ತೆ ಭಟರನ್ನು ಮೋಸಗೊಳಿಸಿದನೆಂದು ರಾಜನಿಗೆ ಅರ್ಥವಾಯಿತು. ಇಂತಹ ಚತುರನನ್ನು ಹಿಡಿಯಲು ಸಾಮಾನ್ಯ ಭಟರಿಂದ ಸಾಧ್ಯವಿಲ್ಲವೆಂದು ಯೋಚಿಸಿ, ರಾಜನು ಸರದಾರನನ್ನು ಕರೆಯಿಸಿ ಹೀಗೆಂದ:

"ಇಂದು ರಾತ್ರಿ ಕಳ್ಳನ ಕುಮಾರನು ತನ್ನ ತಂದೆಯ ಅಸ್ತಿಗಳನ್ನು ಆರಿಸಿಕೊಳ್ಳಲು ಶ್ಮಶಾನಕ್ಕೆ ಬರುತ್ತಾನೆ. ನೀನು ಒಂದು ರಾತ್ರಿ ಶ್ಮಶಾನದಲ್ಲೇ ಕಾವಲಿದ್ದು ಅವನನ್ನು ಹೇಗಾದರೂ ಹಿಡಿದುತಂದರೆ ನಿನಗೆ ಭಾರಿ



ಬಹುಮಾನವೇ ಕೊಡುತ್ತೇನೆ" ಎಂದ. ಸರದಾರನು ಚೋರನನ್ನು ಹಿಡಿಯಲು ಭಾರಿ ಉಪಾಯ ಹೂಡಿದ. ಕಳ್ಳನನ್ನು ದಹನಮಾಡಿದ ಸ್ಥಳದಲ್ಲೆ ಒಂದು ಗುಡಾರ ಹಾಕಿಸಿ, ಅದರಲ್ಲಿ ಒಂದು ಮಂಚ ಹಾಕಿಸಿಕೊಂಡು ಮಲಗಿಕೊಂಡ. ಹೊರಗೆ ಭಟರನ್ನು ಕಾವಲಿರಿಸಿದ್ದನು. ಯಾರಾದರೂ ಅಸ್ತಿಗಳಿಗಾಗಿ ಬಂದರೆ ಭಟರನ್ನು ದಾಟಿ ಗುಡಾರದೊಳಕ್ಕೆ ಬರಬೇಕು!

ಇದೆಲ್ಲವನ್ನೂ ತಿಳಿದುಕೊಂಡು ಹಗಲು ಚುಕ್ಕಿ ಅಂದು ರಾತ್ರಿ ಯುವತಿಯೋರ್ವಳ ವೇಷವನ್ನು ಧರಿಸಿ ಶ್ಮಶಾನಕ್ಕೆ ಹೋದ. ಸರದಾರನ ಗುಡಾರದ ಹೊರಗೆ ಕಾವಲಿದ್ದ ಭಟರು ಆ ಯುವತಿಯನ್ನು ಕಂಡು ಆಶ್ಚರ್ಯ

ಗೊಂಡು "ಯಾರು ನೀನು?" ಎಂದರು. "ಸರದಾರರು ಬರುವಂತೆ ಹೇಳಿದರು" ಎಂದ ಹಗಲುಚುಕ್ಕಿ ಹೆಂಗಸಿನ ಧ್ವನಿಯಲ್ಲಿ. ನಿಜವೆಂತಲೇ ನಂಬಿದರು ಆ ಭಟರು. ಕೊಂಚವೂ ಸಂದೇಹ ವಾಗಲಿಲ್ಲ ಅವರಿಗೆ. ಹಗಲು ಚುಕ್ಕಿಯನ್ನು ಗುಡಾರದೊಳಕ್ಕೆ ಹೋಗಲು ಅನುಮತಿ ಕೊಟ್ಟರು.

ಹಗಲುಚುಕ್ಕಿ ಒಳಗೆ ಹೋಗಿ ಮಂಚದ ಮೇಲೆ ಮಲಗಿ ನಿದ್ದೆಮಾಡುತಿದ್ದ ಸರದಾರ ನನ್ನು ಎಬ್ಬಿಸಿದ. ಸರದಾರನು ಬೆಚ್ಚಿಬಿದ್ದು 'ಯಾರಲೇ ನೀನು?' ಎಂದು ಕತ್ತು ಹಿಡಿದುಕೊಂಡ.

"ಅಯ್ಯೋ ನನ್ನ ಕೊರಳಲ್ಲಿದ್ದ ಮುತ್ತಿನ ಸರ ಕಿತ್ತುಹೋಯಿತು. ಮುತ್ತುಗಳೆಲ್ಲಾ ಕೆಳಗೆ ಬಿದ್ದುಬಿಟ್ಟವು" ಎಂದು ಹೆಂಗಸಿನ ವೇಷದಲ್ಲಿದ್ದ ಹಗಲುಚುಕ್ಕಿ ಮಂಚದ ಕೆಳಗೆ ಬಾಗಿ ಗಡಿಬಿಡಿಯಿಂದ ಮುತ್ತುಗಳನ್ನು ಆರಿಸುತ್ತಿರುವವಳಂತೆ ನಟಿಸಿದ.

"ತೊಲಗು ಇಲ್ಲಿಂದ. ನಡಿ ಆಚೆ" ಎಂದು ಅರಚಿದ ಸರದಾರ.

"ಹೊರಟು ಹೋಗುತ್ತೇನೆ ಸ್ವಲ್ಪ ಇರಿ. ಮುತ್ತುಗಳನ್ನು ಆರಿಸಿಕೊಳ್ಳುತ್ತೇನೆ" ಎಂದು ಹಗಲುಚುಕ್ಕಿ ತಂದೆಯ ಅಸ್ತಿಗಳನ್ನು ಆರಿಸಿಕೊಂಡು ಹೊರಟುಹೋದ.

ಕಳ್ಳನ ಮಗನು ಸರದಾರನನ್ನೂ ಸಹ ಮೋಸಗೊಳಿಸಿದನೆಂದು ರಾಜನು ಗ್ರಹಿಸಿದ. ಆತನು ಏಕಾಂತವಾಗಿ ಮಂತ್ರಿಯನ್ನು ಕರೆದು "ಮಂತ್ರೀ, ನಿನ್ನಿಂದಲೇ ಈ ಕೆಲಸ ನೆರವೇರ



ಬೇಕು. ತನ್ನ ತಂದೆಯ ಅಸ್ತಿಯನ್ನು ನೀರಿನಲ್ಲಿ ಬಿಡಲು ಕೆರೆಗೆ ಬಂದೇ ಬರುತ್ತಾನೆ ಆ ಹುಡುಗ. ಎಲ್ಲ ಕೆರೆಗಳ ಹತ್ತಿರ ಕಾವಲಿರಿಸಿ ಹೇಗಾದರೂ ಅವನನ್ನು ಈಸಾರಿ ಹಿಡಿಯಲೇ ಬೇಕು" ಎಂದ.

ಈ ವಿಷಯವೂ ಹಗಲು ಚುಕ್ಕಿಗೆ ತಿಳಿಯಿತು. ಅವನು ಅದಕ್ಕೊಂದು ಉಪಾಯ ಹೂಡಿದ. ತನ್ನ ತಂದೆಯ ಅಸ್ತಿಗಳನ್ನು ಪುಡಿ ಮಾಡಿ ಸ್ವಲ್ಪ ನೀರಿನಲ್ಲಿ ತೇವಮಾಡಿ ಶರೀರಕ್ಕೆಲ್ಲಾ ಲೇಪಿಸಿಕೊಂಡ.

"ಅಮ್ಮಾ, ನೀನು ಬಿಕ್ಷುಕಳಂತೆ ವೇಷ ಧರಿಸಿ, ದೇವಸ್ಥಾನದ ಹತ್ತಿರವಿರುವ ಕೆರೆಯ ಗಟ್ಟಿನಮೇಲೆ ಅಡಿಗೆ ಮಾಡುತ್ತಿರು. ಹುಚ್ಚನಂತೆ ನಾನಲ್ಲಿಗೆ ಬಂದು ಕೆರೆಗೆ ಹಾರುತ್ತೇನೆ. ರಾಜಭಟರು ನನ್ನನ್ನು ಹೊರಗೆ ಎಳೆದು ಹಾಕುವಷ್ಟರಲ್ಲಿ ತಂದೆಯ ಅಸ್ತಿಗಳು ನೀರಿನಲ್ಲಿ ಬೆರೆತುಹೋಗುವುವು. ನೀನು ಮಾಡಿದ ಅನ್ನವನ್ನು ಒಂದು ಎಲೆಯಲ್ಲಿಟ್ಟು ನನ್ನ ಹತ್ತಿರಕ್ಕೆ ಬಂದು ಊಟಕ್ಕೆ ಕರೆ. ಆ ವೇಳೆಗೆ ಕಾಗೆಗಳು ಬಂದು ಅನ್ನವನ್ನು ತಿಂದುಬಿಡುತ್ತವೆ. ನಾನು ನಿನ್ನಮೇಲೆ ಕೋಪಗೊಂಡವನಂತೆ ಎರಡು ಏಟು ಬಡಿದು, ನಿನ್ನ ಬಳೆಗಳನ್ನು ಒಡೆದುಹಾಕುವೆನು, ಮಂಗಳಸೂತ್ರ ಕಿತ್ತು ಹಾಕುವೆನು. ನೀನು ಏಟುಗಳನ್ನು ಸಹಿಸಿಕೊಳ್ಳಲಾರದವಳಂತೆ ಕೆರೆಗೆ ಧುಮುಕಿ ಸ್ನಾನ ಮಾಡು, ತರುವಾಯ ನಿನ್ನನ್ನು ನಾನು ಹೊರಕ್ಕೆ ತೆಗೆಯುವೆನು. ಈರೀತಿ ತಂದೆಯ



ಉತ್ತರಕ್ರಿಯೆಗಳನ್ನು ಮುಗಿಸೋಣ" ಎಂದು ಹಗಲುಚುಕ್ಕಿ ತಾಯಿಯೊಂದಿಗೆ ಹೇಳಿದ.

ಎಲ್ಲಾ ನೆನೆಸಿದ ಪ್ರಕಾರವೇ ನಡೆಯಿತು. ದೇವಸ್ಥಾನದ ಕೆರೆಯ ಹತ್ತಿರ ನಡೆದುದನ್ನೆಲ್ಲಾ ಕೇಳಿದ ಕೂಡಲೇ ಮಂತ್ರಿಗೆ ಸಂದೇಹ ಉಂಟಾಯಿತು. ಆತನು ಇದೆಲ್ಲವನ್ನೂ ರಾಜನಿಗೆ ಹೇಳಲು "ಇದರಲ್ಲಿ ಸಂದೇಹವೇ ಇಲ್ಲ. ಅವರೇ ಸತ್ತುಹೋದ ಕಳ್ಳನ ಮಡದಿಮಕ್ಕಳು. ಆದರೂ ಸಮಯವಿನ್ನೂ ಮಿಂಚಿಲ್ಲ. ತಂದೆಗಾಗಿ ಇಷ್ಟೊಂದು ಸಾಹಸ ಮಾಡಿದವನು ಬ್ರಾಹ್ಮಣರಿಗೆ ದಾನಧರ್ಮಗಳನ್ನು ಮಾಡದಿರುವನೇ? ಆದುದರಿಂದ ಬ್ರಾಹ್ಮಣರಮೇಲೆ ಸ್ವಲ್ಪನಿಗಾ ಇಟ್ಟು, ಆ ಕಳ್ಳನ ಮನೆ ಎಲ್ಲಿರುವುದೋ ಪತ್ತೆಮಾಡಿ" ಎಂದ.

ಅದೃಷ್ಟವಶಾತ್ ಅಂದು ದೂರದೇಶದಿಂದ ಕೆಲವು ಭಟ್ಟರು ಧಾರಾನಗರಕ್ಕೆ ಬಂದು ಒಂದು ಛತ್ರದಲ್ಲಿ ತಂಗಿದ್ದರು. ಅರ್ಧರಾತ್ರಿ ಸಮಯದಲ್ಲಿ ಹಗಲುಚುಕ್ಕಿ ಛತ್ರಕ್ಕೆ ಹೋಗಿ ಅವರನ್ನು ಕರೆದುಕೊಂಡು ಸಂದುಗೊಂದುಗಳಲ್ಲಿ ತಪ್ಪುದಾರಿಗಳಲ್ಲಿ ಸುತ್ತಿಸಿ ಮನೆಗೆ ಕರೆದುಕೊಂಡು ಹೋಗಿ, ಅಲ್ಲಿ ಅವರಿಗೆ ಶಾಸ್ತ್ರೋಕ್ತವಾಗಿ ದಾನಧರ್ಮಗಳನ್ನು ಕೊಟ್ಟು, ಬೆಳಗಾಗುವ ವೇಳೆಗೆ ಅವರನ್ನು ಮತ್ತೆ ಛತ್ರಕ್ಕೆ ಕರೆದುಕೊಂಡು ಹೋಗಿ ಸೇರಿಸಿ, ತನ್ನಪಾಡಿಗೆ ತಾನು ಮನೆ ಸೇರಿದನು.

ಛತ್ರದಲ್ಲಿ ಇಳಿದಿದ್ದ ನೆರೆರಾಜ್ಯದ ಬ್ರಾಹ್ಮಣರು ಎಲ್ಲಿಂದಲೋ ಸಂಭಾವನೆ ಪಡೆದರೆಂದು ರಾಜಭಟರಿಗ ತಿಳಿಯಲು, ಅವರು ಬ್ರಾಹ್ಮಣರನ್ನು ಪ್ರಶ್ನೆಮಾಡಿ ಎಲ್ಲವಿಷಯವನ್ನೂ ತಿಳಿದುಕೊಂಡರು. ಆದರೆ ಕತ್ತಲೆಯಲ್ಲಿ, ಹೊಸ ಸ್ಥಳದಲ್ಲಿ, ಸಂದುಗೊಂದುಗಳಲ್ಲಿ ನಡೆದು ಯಾರದೋ ಮನೆಗೆ ಹೋದ ಬ್ರಾಹ್ಮಣರು ರಾಜಭಟರಿಗೆ ಹಗಲುಚುಕ್ಕಿಯ ಮನೆಯನ್ನು ತೋರಿಸಲು ಅಸಮರ್ಥರಾದರು.

ಇಷ್ಟು ಯುಕ್ತಿವಂತನಾದ ಚೊರನನ್ನು ಹಿಡಿಯುವುದು ಯಾರಿಂದಲೂ ಸಾಧ್ಯವಿಲ್ಲವೆಂದು ರಾಜನಿಗೆ ತೋರಿತು.

ಆತನು ಸಭೆಯಲ್ಲಿ "ನಮ್ಮ ಭಟರನ್ನೂ, ಸರದಾರನನ್ನೂ, ಮಂತ್ರಿಯನ್ನೂ ಮೋಸಗೊಳಿಸಿ, ತನ್ನತಂದೆಯ ಉತ್ತರಕ್ರಿಯೆಗಳನ್ನು ಸಾಂಗವಾಗಿ ನೆರವೇರಿಸಿದ ಯುವಕನು ಯಾರೋ ಮುಂದೆಬಂದು ನಿಂತರೆ ಆತನನ್ನು ಕ್ಷಮಿಸುವುದು ಮಾತ್ರವೇ ಅಲ್ಲ, ಆತನಿಗೆ ನಮ್ಮ ಮಗಳನ್ನು ಕೊಟ್ಟು ವಿವಾಹ ಮಾಡುವೆವು" ಎಂದು ಸಾರಿದ.

ಗಣ್ಯಮನುಷ್ಯನ ಉಡುಪಿನಲ್ಲಿದ್ದ ಹಗಲುಚುಕ್ಕಿ ಪಟಕ್ಕನೆ ಎದ್ದು ನಿಂತು "ಮಹಾಪ್ರಭೂ, ನಾನೇ ಆ ಚೋರ" ಎಂದ.

ರಾಜನು ತನ್ನ ಮಾತಿನ ಪ್ರಕಾರ ಹಗಲುಚುಕ್ಕಿಗೆ ತನ್ನ ಮಗಳನ್ನು ಕೊಟ್ಟು ವಿಜೃಂಭಣೆಯಿಂದ ವಿವಾಹಮಾಡಿದ. ಹಗಲುಚುಕ್ಕಿ ಅಂದಿನಿಂದ ಕಳ್ಳತನ ಮಾಡುವುದನ್ನು ತ್ಯಜಿಸಿ, ಯೋಗ್ಯನಾಗಿ ಹೆಂಡತಿಯೊಂದಿಗೆ ಸಂಸಾರಮಾಡಿಕೊಂಡಿದ್ದನು.








# ಶಿಲಾ ಸಿಂಹ

ಒಂದಾನೊಂದು ದೇಶದಲ್ಲಿ ಇಬ್ಬರು ಸಹೋದರರಿದ್ದರು. ಅವರಿಗೆ ತಂದೆ ಇರಲಿಲ್ಲ; ತಾಯಿ ಮಾತ್ರವಿದ್ದಳು. ಅವರಲ್ಲಿ ಹಿರಿಯವನಾದ ಕೆಂಪಣ್ಣ ಯುಕ್ತಿವಂತ, ಸ್ವಾರ್ಥಿ. ಕಿರಿಯವನಾದ ಮಾಯಣ್ಣ ಒಳ್ಳೆಯವನು, ಅಮಾಯಕ. ಅಣ್ಣನ ಸಂಪಾದನೆಯಿಂದಲೇ ಸಂಸಾರ ನಡೆಯುತಿತ್ತು. ಮಾಯಣ್ಣನಿಗೆ ಕಷ್ಟಪಟ್ಟು ದುಡಿಯುವುದು ಹೊರತು ಮತ್ತೇನೂ ಗೊತ್ತಿಲ್ಲ.

ಒಂದುದಿನ ಹಿರಿಯವನು ಕಿರಿಯವನೊಂದಿಗೆ "ತಮ್ಮಾ, ನನ್ನ ಮೈದುಡಿಮೆಯಿಂದ ನಿನ್ನನ್ನು ಎಷ್ಟುದಿನಾ ಅಂತ ಪೋಷಿಸಲಿ? ನಾಳೆಯಿಂದ ಎಲ್ಲಿಯಾದರೂ ಹೋಗಿ ನೀನು ಬದುಕುವ ದಾರಿಯನ್ನು ನೋಡಿಕೊ" ಎಂದು ಸೂಕ್ಷ್ಮವಾಗಿ ಹೇಳಿದ.

ಈ ಮಾತುಗಳನ್ನು ಕೇಳಿ ಮಾಯಣ್ಣನು ತುಂಬಾ ನೊಂದುಕೊಂಡ. ಮನೆಬಿಟ್ಟು ಬೇರೆಲ್ಲಿಗಾದರೂ ಹೋಗಲು ನಿರ್ಧರಿಸಿಕೊಂಡ. ತಾಯಿಗೆ ನಡೆದ ವಿಷಯವನ್ನೆಲ್ಲಾ ತಿಳಿಸಿ "ಹೋಗಿ ಬರುತ್ತೇನೆ" ಎಂದ.

ಆಕೆಗೆ ಕೆಂಪಣ್ಣನ ಮೇಲೆ ಬಹುಕೋಪ ಬಂತು. "ನಿನ್ನನ್ನು ಸಾಕಲಾರದವನು ನನ್ನನ್ನು ಮಾತ್ರ ಕಾಪಾಡುವನೆ? ನಡಿ, ಮಗೂ, ನಾನೂ ನಿನ್ನೊಂದಿಗೆ ಬರುತ್ತೇನೆ" ಎಂದು ಆಕೆಯೂ ಪ್ರಯಾಣಕ್ಕೆ ಸಿದ್ಧಳಾದಳು.

ಮಾರನೇಯ ದಿನ ಬೆಳಗಿನ ಜಾವವೇ ತಾಯಿ ಮಕ್ಕಳಿಬ್ಬರೂ ಒಂದು ಗುಡ್ಡವನ್ನು ಸೇರಿದರು. ಆ ಗುಡ್ಡದ ತಪ್ಪಲಲ್ಲಿ ಅವರಿಗೊಂದು ಖಾಲಿಮನೆ ಕಾಣಿಸಿತು. ಆ ಸ್ಥಳವೇ ತಮಗೆ ಉತ್ತಮವಾಗಿ ತೋರಿತು. ಆ ರಾತ್ರಿ ಅಲ್ಲೇ ಮಲಗಿದರು.

ಮಾರನೇಯ ದಿನ ಬೆಳಗ್ಗೆ ಮಾಯಣ್ಣ ಕೊಡಲಿಯನ್ನು ಭುಜದಮೇಲಿಟ್ಟುಕೊಂಡು ಗುಡ್ಡದಮೇಲಕ್ಕೆ ಹೋದ. ಸಾಯಂಕಾಲದ ಹೊತ್ತಿಗೆ ಒಂದು ಹೊರೆ ಸೌದೆ ಸಿದ್ಧವಾಯಿತು. ಅದನ್ನು ಪಟ್ಟಣದಲ್ಲಿ ಮಾರಿ,

ಪಿ. ಸುಗುಣಾವತಿ




ಬಂದ ಹಣವನ್ನು ತಾಯಿಗೆ ತೆಗೆದುಕೊಂಡು ಹೋಗಿಕೊಟ್ಟನು. "ಅಮ್ಮಾ, ದಿನಾ ಇದೇ ರೀತಿ ಹಣ ಸಂಪಾದಿಸುವೆನು. ನಮಗೆ ಯಾರ ಹಂಗೂ ಇರುವುದಿಲ್ಲ. ಸುಖವಾಗಿ ಕಾಲ ನೂಕೋಣ" ಎಂದ ಮಾಯಣ್ಣ.

ಮಾರನೇಯ ದಿವಸ ಅವನು ಗುಡ್ಡದ ಮೇಲೆ ಮತ್ತೊಂದು ಕಡೆ ಕಟ್ಟಿಗೆ ಸೀಳುತ್ತಿರುವಾಗ ಅವನಿಗೆ ಅಲ್ಲೊಂದು ಕಡೆ ಶಿಲಾವಿಗ್ರಹ ಕಾಣಿಸಿತು. ಸಿಂಹ ವನ್ನ ಹೋಲುತ್ತಿದ್ದ ಅದು ನೆಲದಿಂದ ಉದ್ಭವಿಸಿತ್ತು. ಅದನ್ನ ಕಂಡು ಆತ ಈ ರೀತಿ ಯೋಚಿಸಿದ: "ಈ ಗುಡ್ಡಕ್ಕೆ ಇದೇ ಅಧಿದೇವತೆ. ಇದರ ಅನುಗ್ರಹದಿಂದ ಜೀವನಸಾಗುತ್ತದೆ. ನಾಳೆ ಈ ದೇವತೆಗೆ ದೀಪಾರಾಧನೆ ಮಾಡಬೇಕು."

ತಾನು ಯೋಚಿಸಿದ ಪ್ರಕಾರ ಮಾರನೇಯ ದಿವಸ ಮನೆಯಿಂದ ಹಣತೆ, ಎಣ್ಣೆ, ಬತ್ತಿಗಳನ್ನು ತಂದು ಶಿಲಾಸಿಂಹದ ಮುಂದೆ ದೀಪಾರಾಧನೆ ಮಾಡಿ, ಅಡ್ಡಬಿದ್ದು "ಸ್ವಾಮಿ, ತಂದೆಯೇ, ಪ್ರತಿದಿನವೂ ನನಗೆ ಹೆಚ್ಚು ಗಟ್ಟಳೆ ಸೌದೆ ಸಿಗುವಂತೆ ಅನುಗ್ರಹಿಸು" ಎಂದು ಬೇಡಿಕೊಂಡ.

ಮರುಕ್ಷಣವೇ ಆ ಶಿಲಾ ಸಿಂಹವು ಬಾಯಿ ತೆರೆದು "ನೀನಿಲ್ಲಿ ಏನುಮಾಡುತ್ತಿರುವೆ?"— ಎಂದು ಕೇಳಿತು.

"ಸ್ವಾಮಿ, ನನ್ನ ಅಣ್ಣ ನನ್ನನ್ನು ಮನೆಯಿಂದ ಅಟ್ಟಬಿಟ್ಟ. ನಾನು ಇಲ್ಲಿಗೆ ಬಂದು ಸೌದೆ ಕಡಿದು ನನ್ನ ತಾಯಯಿನ್ನು ಪೋಷಿಸುತ್ತಿರುವೆನು. ನೀವು ದಯವಿಟ್ಟು ನನಗೆ ಯಾವ ಕೊರತೆಯೂ ಉಂಟಾಗದಂತೆ ನೋಡಿಕೊಳ್ಳಬೇಕು." ಎಂದ ಮಾಯಣ್ಣ

"ಸರಿ. ನಾಳೆ ಇದೇ ಹೊತ್ತಿಗೆ ಒಂದು ಬುಟ್ಟಿಯನ್ನು ತೆಗೆದುಕೊಂಡು ಬಾ. ನಿನಗೆ ಹಣ ಕೊಡುತ್ತೇನೆ" ಎಂದಿತು ಆ ಸಿಂಹ.

ಮಾಯಣ್ಣನ ಆನಂದಕ್ಕೆ ಎಣೆಯೇ ಇಲ್ಲ. ಅವನು ಶಿಲಾಸಿಂಹಕ್ಕೆ ಮತ್ತೆ ಮತ್ತೆ ನಮಸ್ಕಾರಮಾಡಿ ಅಂದು ತಾನು ಸೀಳಿದ ಸೌದೆಯನ್ನು ಪಟ್ಟಣಕ್ಕೆ ಕೊಂಡೊಯ್ದು ಅದನ್ನು ಮಾರಿದ. ಬಂದ ಹಣದಿಂದ ಒಂದು ಬುಟ್ಟಿಯನ್ನು ಕೊಂಡುಕೊಂಡು ಮನೆಗೆ ಹೋದ.

ಮಾರನೇಯ ದಿವಸ ತಿಳಿಸಿದ ಸಮಯಕ್ಕೆ ಶಿಲಾಸಿಂಹದ ಹತ್ತಿರ ಬಂದು, ನಮಸ್ಕಾರ

ಮಾಡಿ "ಸ್ವಾಮಿ, ತಮ್ಮ ಆಜ್ಞೆಯಂತೆ ಬಂದಿದ್ದೇನೆ" ಎಂದ ಅತಿ ವಿನಯದಿಂದ.

"ಒಳ್ಳೆಯದಾಯಿತು. ನಾನು ಹೇಳಿದಂತೆ ಮಾಡು. ಎಲ್ಲಿ, ಬುಟ್ಟಿಯನ್ನು ನನ್ನ ಬಾಯಿಯ ಅಡಿಯಲ್ಲಿಡು. ಅದನ್ನು ಬಂಗಾರದ ನಾಣ್ಯಗಳಿಂದ ತುಂಬುವೆನು. ಆದರೆ ಹುಷಾರ್, ಅದು ತುಂಬಿದ ತಕ್ಷಣ ನಿಲ್ಲಿಸುವಂತೆ ನನಗೆ ಹೇಳಬೇಕು. ಒಂದು ನಾಣ್ಯವಾದರೂ ಕೆಳಗೆ ಉರುಳಿಬಿತ್ತೋ ನಿನಗೆ ಕೇಡು ಸಂಭವಿಸುವುದು"

ಶಿಲಾಸಿಂಹದ ಆಜ್ಞೆಯಂತೆ ಮಾಯಣ್ಣ ಬುಟ್ಟಿಯನ್ನು ಅದರ ಬಾಯಿಯ ಅಡಿಯಲ್ಲಿಟ್ಟ. ಸಿಂಹದ ಬಾಯಿಯಿಂದ ನಾಣ್ಯಗಳು ಪ್ರವಾಹದಂತೆ ಸುರಿದು ಬುಟ್ಟಿ ತುಂಬುತಲಿತ್ತು. ತೀರಾ ತುಂಬುವ ಸಮಯ ನೋಡಿ "ನಿಲ್ಲಿಸಿ ಸ್ವಾಮಿ" ಎಂದ ಮಾಯಣ್ಣ. ಕೂಡಲೇ ನಾಣ್ಯದ ಪ್ರವಾಹ ನಿಂತುಬಿಟ್ಟಿತು. ಮಾಯಣ್ಣ ಆ ಶಿಲಾಸಿಂಹಕ್ಕೆ ತನ್ನ ಕೃತಜ್ಞತೆಯನ್ನು ಸೂಚಿಸಿ, ನಮಸ್ಕಾರಮಾಡಿ, ಬುಟ್ಟಿಯನ್ನು ಭುಜದ ಮೇಲೆ ಹೊತ್ತುಕೊಂಡು ಗುಡ್ಡದಮೇಲಿಂದ ಇಳಿದನು. ಮಗನು ತಂದ ಬಂಗಾರದ ನಾಣ್ಯಗಳನ್ನು ಕಂಡು ತಾಯಿ ಬೆರಗಾದಳು. ಆದರೆ ಮಾಯಣ್ಣ ಗುಡ್ಡದಮೇಲೆ ನಡೆದ ವಿಷಯವನ್ನೆಲ್ಲಾ ಹೇಳಿದಮೇಲೆ ಆಕೆ ಸಂತೋಷಪರವಶಳಾದಳು. ಮಾಯಣ್ಣ ಆ ಹಣದಲ್ಲಿ ಸ್ವಲ್ಪ ಭಾಗ ಖರ್ಚುಮಾಡಿ ಒಂದು



ಹೊಲ, ಕೆಲವು ಹಸುಗಳನ್ನು ಕೊಂಡುಕೊಂಡ. ಹೊಸ ಮನೆ ಕಟ್ಟಿಸಿಕೊಂಡ. ಬೇಸಾಯ ಮಾಡಿದ. ಐಶ್ವರ್ಯವಂತನಾಗಿ ಸುಖವಾಗಿ ಕಾಲನೂಕುತ್ತಿದ್ದ.

ಮಾಯಣ್ಣ ಭಾಗ್ಯವಂತನಾಗಿರುವ ವಿಷಯ ಕೆಂಪಣ್ಣನಿಗೆ ತಿಳಿಯಿತು. ಈ ಅನಿರೀಕ್ಷಿತ ಬದಲಾವಣೆಗೆ ಕಾರಣವನ್ನು ತಿಳಿಯಲು ಆತನು ತನ್ನ ಪತ್ನಿಯೊಂದಿಗೆ ತಮ್ಮನ ಮನೆಗೆ ಬಂದ. ಮಾಯಣ್ಣ ಅಣ್ಣ ಮತ್ತು ಅತ್ತಿಗೆಯರನ್ನು ಬಹಳ ಆದರದಿಂದ ಬರಮಾಡಿಕೊಂಡ. ತಾನು ಭಾಗ್ಯವಂತನಾದ ರೀತಿಯನ್ನು ಕಪಟವಿಲ್ಲದೆ ಅಣ್ಣಗೆ ತಿಳಿಸಿದ.

ಇಷ್ಟು ಸುಲಭವಾಗಿ, ಸುನಾಯಾಸವಾಗಿ ಹಣ ಸಿಗುವಾಗ ತಾವು ಏಕೆ ಸುಮ್ಮನಿರ




ಬೇಕೆಂದು ಕೆಂಪಣ್ಣ ಮತ್ತು ಆತನ ಕುಟುಂಬಕ್ಕೆ ಅನ್ನಿಸಿತು. ಕೆಂಪಣ್ಣ ಅಂದೇ ಪಟ್ಟಣಕ್ಕೆ ಹೋಗಿ ಹುಡುಕಿ ಹುಡುಕಿ ಒಂದು ಭಾರಿ ಪಾತ್ರೆ ದೀಪಾರಾಧನೆಗೆ ಎರಡು ಹಣತೆಗಳನ್ನು ಕೊಂಡುಕೊಂಡ. ಮಾರನೇಯದಿನ ಬೆಳಗ್ಗೆ ಅವುಗಳೊಂದಿಗೆ ಗುಡ್ಡವನ್ನು ಹತ್ತಿ ಶಿಲಾಸಿಂಹವಿರುವ ಸ್ಥಳವನ್ನು ಪತ್ತೆಮಾಡಿದ. ದೀಪಾರಾಧನೆ ಮಾಡಿ, ಸಿಂಹದ ಮುಂದೆ ಸಾಷ್ಟಾಂಗಬಿದ್ದು "ಸ್ವಾಮಿ, ಅನುಗ್ರಹಿಸು" ಎಂದ ಕೆಂಪಣ್ಣ. "ಯಾರು ನೀನು? ಏನು ಬೇಕು" ಎಂದಿತು ಶಿಲಾಸಿಂಹ.

"ಹಿಂದೊಮ್ಮೆ ನನ್ನ ತಮ್ಮನಿಗೆ ತಾವು ಚಿನ್ನದ ನಾಣ್ಯಗಳನ್ನು ದಯಪಾಲಿಸಿದಂತೆ ನನಗೂ ಕರುಣಿಸಿ" ಎಂದ ನಮ್ರವಾಗಿ.



"ಓ, ಹಾಗೋ. ಪಾತ್ರೆಯನ್ನು ನನ್ನ ಬಾಯಿಯ ಅಡಿಯಲ್ಲಿಟ್ಟರೆ ಅದನ್ನು ನಾಣ್ಯಗಳಿಂದ ತುಂಬಿಸುವೆನು. ಆದರೆ ಒಂದು ನಾಣ್ಯವಾದರೂ ಪಾತ್ರೆಯಿಂದ ಕೆಳಗೆ ಬಿದ್ದರೆ ಪ್ರಮಾದವಾಗುತ್ತದೆ. ಕೂಡಲೇ ನಿಲ್ಲಿಸುವಂತೆ ಹೇಳಬೇಕು" ಎಂದಿತು.

ಕೆಂಪಣ್ಣನ ಬಾಯಿಂದ ಮಾತೇ ಹೊರಡದಾಯಿತು. ಆತನಿಗೆ ಅಷ್ಟೊಂದು ಆನಂದವಾಗಿತ್ತು. ಕಂಪಿಸುತ್ತಿರುವ ಕೈಗಳಿಂದ ಅವನು ಪಾತ್ರೆಯನ್ನು ಸಿಂಹದ ಬಾಯಿಯ ಅಡಿಯಲ್ಲಿಟ್ಟ. ಅದರೊಳಕ್ಕೆ ನಾಣ್ಯಗಳು ಧಾರಾಕಾರವಾಗಿ ಸುರಿಯುತಿದ್ದುವು. ಇನ್ನೂ ಹೆಚ್ಚು ಮೊಹರುಗಳು ಹಿಡಿಯುವಂತೆ ಮಾಡಲು, ಮಧ್ಯೆ ಮಧ್ಯೆ ಅವನು ಪಾತ್ರೆಯನ್ನು ಕುಲುಕುತ್ತಿದ್ದ.

ಪಾತ್ರೆ ಬಾಯಿವರೆವಿಗೂ ಬಂದರೂಸಹ ಆಶಾಗೇಡಿಗನಾದ ಕೆಂಪಣ್ಣ ಸಿಂಹಕ್ಕೆ ನಿಲ್ಲಿಸುವಂತೆ ಎಚ್ಚರಿಕೆ ಕೊಡಲಿಲ್ಲ. ಇದ್ದಕ್ಕಿದ್ದಂತೆ ಒಂದು ನಾಣ್ಯ ಕೆಳಕ್ಕೆ ಉರುಳಿತು. ತತ್ಕ್ಷಣ ಸಿಂಹದ ಬಾಯಿಯಿಂದ ಬರುತ್ತಿದ್ದ ನಾಣ್ಯಧಾರೆ ತಟಕ್ಕನೆ ನಿಂತುಹೋಯಿತು.

"ಅಪ್ಪಾ, ಒಂದು ದೊಡ್ಡ ನಾಣ್ಯ ಗಂಟಲಲ್ಲಿ ಸಿಕ್ಕಿಕೊಂಡಿದೆ. ನಿನ್ನ ಕೈಯಿಂದ ಅದನ್ನು ಹೊರಕ್ಕೆ ತೆಗೆದುಕೋ" ಎಂಬ ಮಾತುಗಳು ಶಿಲಾಸಿಂಹದ ಬಾಯಿಂದ ಹೊರಬಿತ್ತು. ಅವನು ಆಶೆಯಿಂದ ತನ್ನ ಕೈಯನ್ನು ಸಿಂಹದ ಬಾಯೊಳಕ್ಕೆ ತುರುಕಿದ.





ಪಕ್ಕನೆ ಸಿಂಹದ ಬಾಯಿ ಮುಚ್ಚಿಕೊಂಡಿತು. ಕೆಂಪಣ್ಣನ ಕೈ ಸಿಂಹದ ಬಾಯಲ್ಲಿ ಸಿಕ್ಕಿಕೊಂಡಿತು. ಅದನ್ನು ಹೊರಗೆಳೆದುಕೊಳ್ಳಲು ಸರ್ವಪ್ರಯತ್ನಗಳನ್ನೂ ಮಾಡಿದ. ಪ್ರಯೋಜನವಾಗಲಿಲ್ಲ. ಪಾತ್ರೆಯಲ್ಲಿದ್ದ ನಾಣ್ಯಗಳೆಲ್ಲಾ ಕಲ್ಲ ಮತ್ತು ಮಣ್ಣಿನ ಹೆಂಟೆಗಳಾಗಿ ಬದಲಾಯಿಸಿದವು.

ಕತ್ತಲೆಯಾದರೂ ತನ್ನ ಗಂಡನು ಮನೆಗೆ ಹಿಂತಿರುಗದಿರುವುದನ್ನು ಕಂಡು ಆತನ ಹೆಂಡತಿ ಕೆಂಪಣ್ಣನನ್ನು ಹುಡುಕಿಕೊಂಡು ಗುಡ್ಡದಮೇಲಕ್ಕೆ ಹೋದಳು. ಅಲ್ಲಿ ಇಲ್ಲಿ ಸುತ್ತಿ ಗಂಡನಿದ್ದ ಸ್ಥಳವನ್ನು ಸೇರಿಕೊಂಡಳು. ಕೆಂಪಣ್ಣ ತನ್ನ ಹೆಂಡತಿಗೆ ನಡೆದ ವಿಷಯವನ್ನೆಲ್ಲಾ ಅರುಹಿದನು.

ಅಂದುಮೊದಲು ದಿನಂಪ್ರತಿ ಆಕೆ ಕೆಂಪಣ್ಣನಿಗೆ ಊಟ ತೆಗೆದುಕೊಂಡು ಹೋಗುತ್ತಿದ್ದಳು. ಸಂಪಾದಿಸುವವರು ಇಲ್ಲದೆ, ಇದ್ದ ಆಸ್ತಿಯೆಲ್ಲಾ ಮಾರಿಕೊಂಡು ಜೀವನ ನಡೆಸಬೇಕಾದ ಸ್ಥಿತಿ ಬಂತು. ಕ್ರಮೇಣ ಅದೂ ಹೋಯಿತು.

"ನಮ್ಮ ಆಸ್ತಿಯೆಲ್ಲಾ ಕರಗಿಹೋಯಿತು. ಮನೆಯಲ್ಲಿ ಏನೂ ಇಲ್ಲ. ಸಾಲ ಕೊಡುವವರು ಒಬ್ಬರೂ ಕಾಣಿಸರು. ಉಪವಾಸವಿರಬೇಕಾದ ಪರಿಸ್ಥಿತಿಯೊದಗಿದೆ" ಎಂದು ಗಂಡನಮುಂದೆ ಕಣ್ಣೀರು ಸುರಿಸಿದಳು.

ಈ ಮಾತುಗಳನ್ನು ಕೇಳಿ ಶಿಲಾಸಿಂಹವು "ಅಹ್ಹಹ್ಹಾ" ಎಂದು ನಗಲು ಪ್ರಾರಂಭಿಸಿತು. ಕೆಂಪಣ್ಣ ಸರಕ್ಕನೆ ತನ್ನ ಕೈಯನ್ನು ಹೊರಕ್ಕೆಳೆದುಕೊಂಡ.

ಪತಿಪತ್ನಿಯರು ಅಲ್ಲಿಂದ ಮಾಯಣ್ಣನ ಮನೆಗೆ ಹೋಗಿ ತಾವು ಪಟ್ಟಪಾಡನ್ನು ವಿವರಿಸಿದರು. "ದುರಾಶೆ ದುಃಖಕ್ಕೆ ಮೂಲವೆಂದು ಹಿರಿಯರು ಸುಮ್ಮನೆ ಹೇಳಿದರೇ? ಚಿಂತಿಸಬೇಡಿ. ನಾನು ಸ್ವಲ್ಪ ಹಣ ಕೊಡುತ್ತೇನೆ. ಅದರಿಂದ ಒಂದಿಷ್ಟು ಭೂಮಿ ಕೊಂಡು ಕೊಂಡು, ಬೇಸಾಯಮಾಡಿ, ಸುಖವಾಗಿ ಬಾಳಿ" ಎಂದು ಅಣ್ಣನಿಗೆ ಸಲಹೆ ಕೊಟ್ಟ ಮಾಯಣ್ಣ. ಮುಂದೆಹಾಗೇ ಕಷ್ಟಪಟ್ಟು ಕೆಲಸ ಮಾಡಿಕೊಂಡು ಬಾಳಿದರು.





# ಮಾತುಗಾರ

ಅನೇಕ ವರ್ಷಗಳ ಹಿಂದೆ ಗೋಲ್ಕಂಡ ರಾಜ್ಯದಲ್ಲಿ ಒಬ್ಬ ರೈತನಿದ್ದನು. ಒಂದು ದಿನ ಅವನು ತನ್ನ ಹೊಲದಲ್ಲಿ ಬೀಜಗಳನ್ನು ಚೆಲ್ಲುತ್ತಾ ಇರುವಾಗ ಆ ದೇಶದ ನವಾಬನು ಸಾಧಾರಣವಾದ ಉಡುಪನ್ನು ಧರಿಸಿಕೊಂಡು ಕುದುರೆಯ ಮೇಲೆ ಅತ್ತ ಕಡೆಗೆ ಬಂದನು. ಚಿಕ್ಕ ಹೊಲದಲ್ಲಿ ಒಬ್ಬನೇ ಕೆಲಸ ಮಾಡುತ್ತಿದ್ದ ರೈತನ ಯೋಗಕ್ಷೇಮವನ್ನು ತಿಳಿಯುವ ಕುತೂಹಲವಾಯಿತು ನವಾಬನಿಗೆ. ಆದುದರಿಂದ "ಏನಣ್ಣಾ ರೈತ, ವ್ಯವಸಾಯ ಲಾಭದಾಯಕವಾಗಿದೆಯೋ?" ಎಂದು ಕೇಳಿದ.

ರೈತನು ತಲೆ ಎತ್ತಿ ನೋಡಿ "ಏನು ಲಾಭವೋ ಬಿಡಿ ಸ್ವಾಮಿ. ಒಳ್ಳೆ ಬೆಲೆಯಾದ ವರ್ಷ ಎಂಬತ್ತು ರೂಪಾಯಿ ಕೈಗೆ ಬರುತ್ತದೆ" ಎಂದ. ಆತನಿಗೆ ನವಾಬನ ಗುರುತು ಸಿಕ್ಕಲಿಲ್ಲ. "ಅದನ್ನು ಹೇಗೆ ಖರ್ಚು ಮಾಡುವೆ?" ಎಂದು ಕೇಳಿದ ನವಾಬ. "ಏನಿದೆ ಸ್ವಾಮಿ. ಇಪ್ಪತ್ತು ರೂಪಾಯಿ ಕಂದಾಯ ಕೊಡುತ್ತೇನೆ. ಇಪ್ಪತ್ತು ರೂಪಾಯಿ ಬಾಕಿಗಾಗಿ ಜಮಾ ಆಗುತ್ತದೆ. ಇನ್ನೊಂದು ಇಪ್ಪತ್ತು ರೂಪಾಯಿ ಸಾಲ ಕೊಡುತ್ತೇನೆ. ಮತ್ತೊಂದು ಇಪ್ಪತ್ತು ರೂಪಾಯಿ ಗಂಗೆಯ ಪಾಲು ಮಾಡುತ್ತೇನೆ" ಎಂದ ಆ ಬಡರೈತ.

ಇದನ್ನು ಕೇಳಿ ನವಾಬನು ವಿಸ್ಮಯ ಹೊಂದಿದ. "ಯಾವ ಬಾಕಿ ಕೊಡುವೆ, ಯಾರಿಗೆ ಸಾಲ ಕೊಡುವೆ, ಹಣ ಗಂಗೆಪಾಲು ಏಕೆ ಮಾಡುವೆ? ನನಗೆ ಅರ್ಥವಾಗಲಿಲ್ಲ. ತುಸು ವಿವರಿಸುವಿಯಾ?" ಎಂದ.

ಅದಕ್ಕೆ ರೈತನು "ನನ್ನ ತಂದೆಯನ್ನು ಪೋಷಿಸುವೆನು; ಅದು ಸಾಲ ತೀರಿಸುವುದು. ನನ್ನ ಮಗನಿಗೆ ತಿಂಡಿ ಹಾಕುತ್ತೇನೆ, ಅದು ಸಾಲ ಕೊಡುವುದು; ನನ್ನ ಮಗಳಿಗೆ ಕೂಳು ಹಾಕುತ್ತೇನೆ, ಆ ಹಣವು ಗಂಗೆಯಪಾಲಾದಂತೆಯೇ!" ಎಂದು ಗಹಗಹಿಸಿ ನಕ್ಕ.

ರೈತನ ಮಾತಿನಲ್ಲಿ ಅಡಗಿದ್ದ ಚಮತ್ಕಾರವನ್ನು ಗ್ರಹಿಸಿ ನವಾಬನು ಅತಿ ಸಂತಸ

ಎ. ಗೋಪಾಲಕಿಣಿ

ಗೊಂಡು, ಅವನಿಗೆ ಸ್ವಲ್ಪ ಹಣ ಕೊಟ್ಟು, ತಾನು ನವಾಬನೆಂದು ಆ ರೈತನಿಗೆ ತಿಳಿಸಿ ಈರೀತಿ ಹೇಳಿದ: "ನಿನ್ನ ಮಾತಿನಲ್ಲಿ ಸತ್ಯ ವಡಗಿದೆ. ಆದರೆ ನನ್ನೊಂದಿಗೆ ಹೇಳಿದ ಮಾತುಗಳನ್ನು ನನ್ನ ಪರೋಕ್ಷವಾಗಿ ಯಾರೊಂದಿಗೂ ಹೇಳಬೇಡ. ತಿಳಿಯಿತೇ?" ಎಂದು ರೈತನಿಗೆ ಎಚ್ಚರಿಕೆ ಕೊಟ್ಟು ನಾವಾಬನು ಬಂದ ದಾರಿಯಲ್ಲಿ ಹಿಂತಿರುಗಿಹೋದ.

ಅರಮನೆ ಸೇರಿಕೊಂಡಕೂಡಲೇ ನವಾಬನು ತನ್ನ ಆಸ್ಥಾನದ ಉನ್ನತೋದ್ಯೋಗಿಗಳನ್ನು ಬರಮಾಡಿಕೊಂಡು ಹೀಗೆ ಹೇಳಿದ:

"ಈ ದಿನ ನಾನು ಕುದುರೇಸವಾರಿ ಮಾಡಿಕೊಂಡು ಉತ್ತರದ ಕಡೆಹೊರಟೆ. ಊರಿಗೆ ಓಂದೂವರೆ ಮೈಲಿ ದೂರದಲ್ಲಿ ಸಣ್ಣದೊಂದು ಹೊಲದಲ್ಲಿ ರೈತನೊಬ್ಬನು ಬೀಜವನ್ನು ಚೆಲ್ಲುತ್ತಿದ್ದ. ಅವನನ್ನು ಕುರಿತು ಬೇಸಾಯ ಲಾಭದಾಯಕವಾಗಿದೆಯೇ? ಎಂದು ಕೇಳಿದೆ. ಅದಕ್ಕೆ ಉತ್ತರವಾಗಿ ಬೆಲೆ ಚೆನ್ನಾಗಿ ಆದರೆ ಎಂಬತ್ತು ರೂಪಾಯಿ ಕೈಗೆ ಬರುತ್ತದೆ ಎಂದ. ಆ ಹಣವನ್ನು ಹೇಗೆ ಖರ್ಚುಮಾಡುವೆ ಎಂದು ಕೇಳಲು ಇಪ್ಪತ್ತು ರೂಪಾಯಿ ಕಂದಾಯ ಸಲ್ಲಿಸುವೆನು, ಇಪ್ಪತ್ತು ರೂಪಾಯಿ ಬಾಕಿ ತೀರಿಸುವೆನು, ಇನ್ನೊಂದು ಇಪ್ಪತ್ತು ಸಾಲ ಕೊಡುವೆನು, ಉಳಿದ ಇಪ್ಪತ್ತು ರೂಪಾಯಿಗಳನ್ನು ಗಂಗೆಪಾಲು ಮಾಡುವೆನು ಎಂದು ಹೇಳಿದ. ಆ ರೈತನೇನೂ ವಿದ್ಯಾವಂತನಲ್ಲ. ಸಂಸ್ಕಾರವಿಲ್ಲದ ಮಾನವನವನು. ಕೇವಲ ಹೊಲ ಸಾಗುವಳಿಮಾಡುವ ವ್ಯಕ್ತಿ.



ಆದರೂ ಅವನು ತುಂಬಾ ಭಾವಗರ್ಭಿತವಾಗಿ ಜವಾಬು ಕೊಟ್ಟಿದ್ದಾನೆ. ನೀವೆಲ್ಲರೂ ವಿದ್ವಾಂಸರು. ನಿಮ್ಮಲ್ಲಿ ಯಾರಾದರೂ ಆ ಮಾತುಗಳ ಗೂಢಾರ್ಥವನ್ನು ತಿಳಿಸಿದರೆ ಅವರಿಗೆ ಒಂದು ಜಹಗೀರನ್ನು ಬಹುಮಾನವಾಗಿ ಕೊಡುತ್ತೇನೆ."

ನವಾಬನಿತ್ತ ಸಮಸ್ಯೆಗೆ ಸಮಾಧಾನ ಕೊಡಲು ಯಾರಿಂದಲೂ ಸಾಧ್ಯವಾಗಲಿಲ್ಲ. ಒಬ್ಬ ಅಧಿಕಾರಿಮಾತ್ರ ನವಾಬನೊಂದಿಗೆ ಮಾತನಾಡಿದ ರೈತನನ್ನು ಹುಡುಕಿಕೊಂಡು ಹೋಗಿ, "ಅಯ್ಯಾ, ನೀನು ನವಾಬರೊಂದಿಗೆ ಹೇಳಿದ ಮಾತುಗಳ ಅರ್ಥವನ್ನು ನನಗೆ ತಿಳಿಸಿದೆಯಾದರೆ ನಿನಗೆ ನೂರು ವರಹಗಳನ್ನು ಕೊಡುವೆನು" ಎಂದು ವರಹಗಳು ತುಂಬಿದ್ದ ಚೀಲವನ್ನು ರೈತನಮುಂದೆ ಹಿಡಿದ.

ಆ ನಾಣ್ಯಗಳನ್ನು ನೋಡಿ ಅಧಿಕಾರಿಗೆತನ್ನ ಮಾತುಗಳ ಗೂಢಾರ್ಥವನ್ನು ತಿಳಿಸಿಬಿಟ್ಟ ಆ ರೈತ. ಅಧಿಕಾರಿ ನವಾಬನ ಹತ್ತಿರಕ್ಕೆ ಹೋಗಿ ಸಮಸ್ಯೆಗೆ ಸಮಾಧಾನ ಹೇಳಿದ.

ರೈತನು ತನ್ನ ಆಜ್ಞೆಯನ್ನು ಮೀರಿದನೆಂದು ಅರಿತು, ನವಾಬನು ರೈತನನ್ನು ಆಸ್ಥಾನಕ್ಕೆ ಕರೆಯಿಸಿ "ಎಲೈ ರೈತನೇ, ನನ್ನ ಮಾತನ್ನು ಅತಿಕ್ರಮಿಸಿದೆ ಯಾದುದರಿಂದ ನಿನಗೆ ಮರಣ ದಂಡನೆ ವಿಧಿಸುವೆನು. ಇದಕ್ಕೆ ಏನು ಸಮಜಾಯಿಸಿ ಕೊಡುವೆ?" ಎಂದು ಕೇಳಿದ.

ರೈತನು ಧೈರ್ಯದಿಂದ "ಸ್ವಾಮಿ, ನಾನು ತಮ್ಮ ಆಜ್ಞೆಯನ್ನು ಮೀರಲಿಲ್ಲ. ತಮ್ಮ ಸಮಕ್ಷದಲ್ಲೇ ನಾನು ಅಧಿಕಾರಿಗೆ ಆ ರಹಸ್ಯವನ್ನು ತಿಳಿಸಿದೆ. ನಾನು ಆ ವಿಷಯ ಹೇಳುವಾಗ ನನ್ನ ಎದುರು ನೂರು ನಾಣ್ಯಗಳಿದ್ದುವು. ಪ್ರತಿಯೊಂದು ನಾಣ್ಯದಮೇಲೂ ನೀವಿರುವಿರಿ" ಎಂದು ಆ ರೈತನು ತನ್ನ ಕಿಸೆಯಿಂದ ಒಂದು ನಾಣ್ಯವನ್ನು ತೆಗೆದು ಅದರಮೇಲಿದ್ದ ನವಾಬನ ಚಿತ್ರವನ್ನು ತೋರಿಸಿದ.

ರೈತನ ಬುದ್ಧಿವಂತಿಕೆಗೆ ನವಾಬನು ಮೆಚ್ಚಿ "ನಿಜ. ನಾಣ್ಯದಲ್ಲಿರುವುದು ನಾನೇ" ಎಂದು ರೈತನಿಗೆ ಮತ್ತಷ್ಟು ಬಹುಮಾನವನ್ನು ಕೊಟ್ಟು ಕಳುಹಿಸಿದನು.





# ಚೀನಾಂಬರಗಳು

ಮೂರು ಸಾವಿರ ವರ್ಷಗಳಹಿಂದೆ ಚೀನಾ ದೇಶದ ಚಕ್ರವರ್ತಿ ಅಂದವಾದ ಯುವತಿ ಯೊಬ್ಬಳನ್ನು ಮದುವೆಯಾದನು. ಆಕೆಯ ಹೆಸರು ಸೀಲಿಂಗ್‌ಷಿ. ಆಕೆಗೆ ಹದಿನಾಲ್ಕು ವರ್ಷ ವಯಸ್ಸು. ಚೀನಾದೇಶದ ಚಕ್ರವರ್ತಿಯ ಪಟ್ಟದರಾಣಿ ಸೀಲಿಂಗ್‌ಷಿಗೆ ಯಾವ ಕೊರತೆಯೂ ಇರಲಿಲ್ಲ. ದಿನವಿಡೀ ಆಕೆಯನ್ನು ಉಲ್ಲಾಸಗೊಳಿಸಲು ಗಾಯಕರು, ನರ್ತಕಿಯರು ಸಿದ್ಧರಿದ್ದರು. ಪರಿಚಾರಿಕೆಯರು ಯಾವಾಗಲೂ ಸಿದ್ಧರಿದ್ದರು.

ಇಷ್ಟೊಂದು ಸೌಕರ್ಯಗಳಿದ್ದರೂ ಸಹ ಸೀಲಿಂಗ್‌ಷಿಗೆ ಒಂದು ವಿಧವಾದ ಚಿಂತೆ ಹಿಡಿಯಿತು. ಆಕೆಯ ಕಣ್ಣುಗಳಿಂದ ನಿರಂತರ ಧಾರಾಕಾರವಾಗಿ ಕಂಬನಿ ಹರಿಯುವುದು. ಆಕೆಯ ದುಃಖವನ್ನು ದೂರಮಾಡಲು ಅನೇಕರು ಪ್ರಯತ್ನಪಟ್ಟರು. ಆದರೆ ಪ್ರಯೋಜನವಾಗಲಿಲ್ಲ. ಆಕೆ ಎಂದೂ ತೌರುಮನೆಯನ್ನು ಬಿಟ್ಟಿದ್ದವಳಲ್ಲ. ಅದೇ ಆಕೆಯ ಚಿಂತೆಗೆ ಕಾರಣ. ಸಣ್ಣ ವಯಸ್ಸಿನಾಕೆ. ದೂರದಲ್ಲಿದ್ದ ತಂದೆತಾಯಿಗಳನ್ನೂ, ಅಣ್ಣತಮ್ಮಂದಿರನ್ನೂ ನೆನೆ ನೆನೆದು ಸದಾ ಕೊರಗುತ್ತಿದ್ದಳು.

ತನ್ನ ಪಟ್ಟದರಸಿ ವ್ಯಾಕುಲಗೊಂಡಿರುವಳೆಂಬ ವಾರ್ತೆ ಚಕ್ರವರ್ತಿಗೆ ತಿಳಿಯಿತು. ಆತನು ತನ್ನ ಇಬ್ಬರು ಸಚಿವರೊಂದಿಗೆ ಉದ್ಯಾನವನಕ್ಕೆ ಬಂದ. ಉದ್ಯಾನದಲ್ಲಿ ಒಂದು ಹಿಪ್ಪ ನೇರಳೆಮರದ ನೆರಳಿನಲ್ಲಿ ಕುಳಿತಿದ್ದ ತನ್ನ ಪತ್ನಿಯನ್ನು ಸಮೀಪಿಸಿ, "ರಾಣೀ, ನಿನಗಿರುವ ಕೊರತೆ ಯಾದರೂ ಏನು?" ಎಂದು ಕೇಳಿದ.

"ಪ್ರಭೂ, ನನಗೆ ಯಾವ ಕೊರತೆಯೂ ಇಲ್ಲ. ನೀವು ಕಳವಳಪಡಬೇಡಿ. ನನ್ನ ಮನಸ್ಸು ಉಲ್ಲಾಸವಾಗಿಲ್ಲ, ಅಷ್ಟೇ" ಎಂದಳು ಸೀಲಿಂಗ್‌ಷಿ.

ಮಹಾರಾಜನು ತನ್ನ ಸಚಿವರ ಕಡೆ ನೋಡಿ "ನೀವು ಮಹಾರಾಣಿಯವರ ಚಿಂತೆ ದೂರಮಾಡಲು ಉಪಾಯವನ್ನು ಯೋಚಿಸಿ

ಡಿ. ಸುಬ್ರಹ್ಮಣ್ಯ




ಹೇಳಿ" ಎಂದು ಆಜ್ಞೆ ಮಾಡಿ ಅಲ್ಲಿಂದ ಹೊರಟುಹೋದ. ತಮ್ಮ ತಮ್ಮಲ್ಲಿ ವಿಚಾರ ವಿನಿಮಯ ಮಾಡಿಕೊಳ್ಳುತ್ತಾ ಸಚಿವರೂ ಸಹ ಚಕ್ರವರ್ತಿಯನ್ನು ಹಿಂಬಾಲಿಸಿದರು.

ಇಷ್ಟರಲ್ಲಿ ಪರಿಚಾರಿಕೆಯರು ಟೀಪಾನೀಯವನ್ನು ತಂದು ಮಹಾರಾಣಿಯ ಮುಂದಿಟ್ಟರು. ಆಕೆ ವಾಡಿಕೆಯಂತೆ ಸ್ವತಃ ಟೀಯನ್ನು ಬಟ್ಟಲುಗಳಿಗೆ ಸುರಿದು ಗಾಯಕರಿಗೂ, ನರ್ತಕಿಯರಿಗೂ ಕೊಟ್ಟು, ತನ್ನ ಪಾಲಿನ ಬಟ್ಟಲನ್ನು ಮುಂದಿಟ್ಟುಕೊಂಡು ಕುಳಿತಳು. ಟೀ ಬಹಳ ಬಿಸಿಯಾಗಿದ್ದುದರಿಂದ ಆಕೆ ಅದನ್ನು ಕೂಡಲೇ ಕುಡಿಯಲಿಲ್ಲ.

ಈ ಸಮಯದಲ್ಲಿ ಹಿಪ್ಪನೇರಳೆ ವೃಕ್ಷದ ಮೇಲಿಂದ ಯಾವುದೋ ಒಂದು ವಸ್ತು ಮಹಾರಾಣಿ ಮುಂದಿಟ್ಟುಕೊಂಡಿದ್ದ ಟೀ ಬಟ್ಟಲಿನೊಳಕ್ಕೆ ಟಪ್ಪನೆ ಬಿತ್ತು. ಟೀ ಸುತ್ತಲೂ ಚೆಲ್ಲಿ ಮಹಾರಾಣಿಯ ಅಮೂಲ್ಯವಾದ ಉಡುಪುಗಳಮೇಲೆ ಬಿತ್ತು. ಪರಿಚಾರಿಕೆಯರು ನೊಂದುಕೊಂಡರು.

"ನನ್ನ ಬಟ್ಟೆಗಳಿಗಾಗಿ ವ್ಯಥೆಪಡಬೇಡಿ. ಬಟ್ಟಲಲ್ಲಿ ಬಿದ್ದಿರುವ ವಸ್ತುವೇನೋ ನೋಡಿ ಹೇಳಿ" ಎಂದಳಾಕೆ.

ಪರಿಚಾರಿಕೆಯರು ಬಟ್ಟಲಲ್ಲಿದ್ದ ಪಾನೀಯದಿಂದ ಸಣ್ಣ ದಾರದ ಉಂಡೆಯಂತಹ ಪದಾರ್ಥವನ್ನು ತೆಗೆದು ರಾಣಿಯ ಕೈಗೆ ಕೊಟ್ಟರು. ಅದು ಬೇರೆ ಯಾವುದೊ ಅಲ್ಲ; ರೇಷಿಮೆ ಹುಳಗಳು ಹಿಪ್ಪನೇರಳೆ ವೃಕ್ಷಗಳಮೇಲಿಡುವ ಮೊಟ್ಟೆಯ ಗೂಡಾಗಿತ್ತು. ಅಂತಹ ಗೂಡುಗಳು ಆ ವೃಕ್ಷದಮೇಲೆ ಅನೇಕವಿದ್ದವು.

ಟೀಯಲ್ಲಿ ಬಿದ್ದ ಗೂಡನ್ನು ಪರಿಚಾರಿಕೆಯರಿಂದ ತೆಗೆದುಕೊಳ್ಳುತ್ತಿರುವ ಸಮಯದಲ್ಲಿ ಸೀಲಿಂಗ್ ಷಿ ಒಂದು ವಿಚಿತ್ರವನ್ನು ಗಮನಿಸಿದಳು. ಆ ಗೂಡಿನಿಂದ ಅತಿ ತೆಳುವಾದ, ಥಳಥಳ ಹೊಳೆಯುವ ಎಳೆಗಳು ಕೈಗೆ ಬಂದವು.

"ಆಹಾ, ಇದೇ ದಾರವಾದರೆ ಇದರಿಂದ ನೇಯಿಸಿದ ಬಟ್ಟೆಗಳು ಇನ್ನೆಷ್ಟು ಸೊಗಸಾಗಿರಬೇಕು?" ಎಂದು ಯೋಚಿಸಿದಳು ಸೀಲಿಂಗ್ ಷಿ. ಮರುಕ್ಷಣವೇ ಆಕೆಗೊಂದು ಯೋಚನೆ ಹೊಳೆಯಿತು. "ಈ ಎಳೆಗಳು ಬಹು ನವುರಾಗಿದ್ದರೂಸಹ ಬಹಳ ಗಟ್ಟಿಯಾಗಿವೆ. ಈ ಒಂದು ಗೂಡಿನಲ್ಲೇ ಅನೇಕ




ಸಾವಿರ ಗಜ ಎಳೆಯಿದೆ. ಈ ಎಳೆಯನ್ನು ಅನೇಕ ಪದರುಹಾಕಿ ಹುರಿಮಾಡಿದರೆ ದಾರ ತಯಾರಾಗುವುದು. ಆಗ ಅದನ್ನು ಮಗ್ಗಕ್ಕೆ ಹಾಕಿ ನೇತರೆ ಪ್ರಪಂಚದಲ್ಲಿ ಯಾರೂ ಎಂದೂ ನೋಡದಂತಹ ಅಪೂರ್ವವಾದ, ಅಂದವಾದ ಬಟ್ಟೆ ತಯಾರು ಮಾಡಬಹುದು.''

ಈ ಆಲೋಚನೆ ಹೊಳೆದಕೂಡಲೇ ಮಹಾರಾಣಿಗಿದ್ದ ಮನೋವ್ಯಾಧಿ ಮಾಯವಾಯಿತು. ಆಕೆ ಉತ್ಸಾಹ, ಹುಮ್ಮಸ್ಸಿನಿಂದ ಎದ್ದು ತನ್ನ ಪರಿಚಾರಿಕೆಯರನ್ನು ಕರೆದು ತನ್ನ ಕೈಯಲ್ಲಿದ್ದ ಎಳೆಯನ್ನು ಬಿಡಿಸಿ, ಜೋಡೆಳೆ ಹೊಸೆಯುವಂತೆ ಹೇಳಿದಳು. ಆಕೆಯ ಆಜ್ಞೆಯಂತೆ ಅವರು ತೆಳುವಾದ, ಹೊಳೆಯುವ ದಾರವನ್ನು ಹೊಸೆದು ಕಡ್ಡಿಗಳಿಗೆ ಸುತ್ತುತ್ತಿದ್ದರು.

"ಹೀಗೆ ಎಷ್ಟು ದಾರವಿದ್ದರೆ ಒಂದು ಅಂಗಿಗೆ ಬೇಕಾದ ಬಟ್ಟೆಯಾಗುವುದು? ಸರಿ, ನೀವು ಮೊದಲು ಮರದಮೇಲಿರುವ ಗೂಡುಗಳನ್ನೆಲ್ಲಾ ತಂದು ಟೀ ನೀರಿನಲ್ಲಿ ಹಾಕಿ'' ಎಂದು ಆಜ್ಞಾಪಿಸಿದಳು ಮಹಾರಾಣಿ.

ಯಾರಿಗೂ ಒಂದು ಕ್ಷಣವಾದರೂ ವಿರಾಮವಿಲ್ಲ. ಅಂದಿನವರೆವಿಗೂ ಕೆಲಸ ಕಾರ್ಯಗಳಿಲ್ಲದೆ ಕ್ಷಣವೊಂದು ಯುಗವಾಗಿ ಕಳೆಯುತ್ತಿದ್ದ ಮಹಾರಾಣಿಗೆ ಈಗ ಗಂಟೆಗಳು ಕ್ಷಣದಂತೆ ಸಾಗುತ್ತಿದ್ದವು. ಸೂರ್ಯನು ಮುಳುಗುವ ವೇಳೆಗೆ ಆನೇಕ ಉಂಡೆಗಳ ದಾರ ಸಿದ್ಧವಾಯಿತು. ಇನ್ನೂ ಮಾಡಬೇಕಾದ ಕೆಲಸ ಬಹಳವಿದೆ. ಆಕೆ ನೇಯಿಗೆಯವರನ್ನು ಬರಮಾಡಿಕೊಂಡು "ಈ ದಾರ ನೋಡಿ. ಇಷ್ಟು ತೆಳುವಾದ ದಾರವನ್ನು ನೇಯಲು ಅಗತ್ಯವಾದ ಮಗ್ಗಗಳನ್ನು ಕೂಡಲೇ ತಯಾರುಮಾಡಿ. ಬೆಳಗಾಗುವ ವೇಳೆಗೆ ಮಗ್ಗ ಸಿದ್ಧವಾಗಿ ನನ್ನ ಕೋಣೆಯಲ್ಲಿರಬೇಕು'' ಎಂದು ಅಪ್ಪಣೆ ಮಾಡಿದಳು.

ಮಾರನೇಯ ದಿನ ಚಕ್ರವರ್ತಿ ತನ್ನ ಸಚಿವರನ್ನು ಕರೆಯಿಸಿ "ಮಹಾರಾಣಿಯವರ ಚಿಂತೆಯನ್ನು ದೂರಮಾಡಿ, ಆಕೆ ಉಲ್ಲಾಸದಿಂದ ಇರಲು ಏನು ಆಲೋಚನೆಮಾಡಿರುವಿರಿ?'' ಎಂದು ಕೇಳಿದ.

"ಮಹಾಪ್ರಭೂ, ಒಂದು ಸುಂದರವಾದ ನವಿಲನ್ನು ತಂದು ನಮ್ಮ ಉದ್ಯಾನದಲ್ಲಿಟ್ಟರೆ, ಮಹಾರಾಣಿಯವರು ಅದರ ನೃತ್ಯ

ನೋಡುತ್ತಾ, ಅದರ ಗರಿಗಳ ವಿವಿಧ ಬಣ್ಣಗಳನ್ನು ಪರಿಕಿಸುತ್ತಾ ಆನಂದ..." ಎಂದು ಒಬ್ಬ ಸಚಿವ ಬಡಬಡಿಸಿದ. ಚಕ್ರವರ್ತಿ ತಲೆಯಾಡಿಸಿ ಎರಡನೇ ಸಚಿವನ ಕಡೆ ನೋಡಿದ. "ನಮ್ಮ ಉದ್ಯಾನವನದಲ್ಲಿ ಜಲ ಕ್ರೀಡೆಯಾಡಲು ಒಂದು ಸುಂದರ ಕೊಳವನ್ನು ನಿರ್ಮಿಸಿದರೆ ಮಹಾರಾಣಿಯವರು ಅದರಲ್ಲಿ ಈಜುತ್ತಾ...." ಎಂದ ಎರಡನೇ ಸಚಿವ.

ತನ್ನ ಸಚಿವರಿಬ್ಬರಿಗೂ ಸರಿಯಾದ ಉತ್ತರ ಹೊಳೆಯಲಿಲ್ಲವೆಂದುಕೊಂಡು, ಚಕ್ರವರ್ತಿ ತನ್ನ ಪಟ್ಟದರಾಣಿಯನ್ನು ಕರೆದುಕೊಂಡು ಬರುವಂತೆ ನೌಕರರಿಗೆ ಹೇಳಿದ. ಅವರು ವಿನಯದಿಂದ:

"ಪ್ರಭೂ, ಮಹಾರಾಣಿಯವರಿನ್ನೂ ತಮ್ಮ ಕೋಣೆಯಿಂದ ಹೊರಗೆ ಬಂದಿಲ್ಲ" ಎಂದರು.

"ಇಷ್ಟು ಹೊತ್ತಾದರೂ ಇನ್ನೂ ಹೊರಗೆ ಬಂದಿಲ್ಲವೇ?" ಎಂದ ಚಕ್ರವರ್ತಿ ಆಶ್ಚರ್ಯದಿಂದ. ಎಳೆವಯಸ್ಸಿನ ತನ್ನ ಪ್ರಿಯಪತ್ನಿಯ ಆರೋಗ್ಯಕುರಿತು ಆತನು ಕಳವಳಗೊಂಡನು.

ಕೂಡಲೇ ಸಿಂಹಾಸನದಿಂದ ಇಳಿದು ನೆಟ್ಟಗೆ ರಾಣಿಯಿದ್ದ ಕೋಣೆಗೆ ಹೋದ. ಅಲ್ಲಿ ಕಂಡ ದೃಶ್ಯ ಆತನಿಗೆ ಆಶ್ಚರ್ಯ ಮತ್ತು ಆನಂದವನ್ನುಂಟುಮಾಡಿತು. ಮಹಾರಾಣಿ ದುಃಖ ಸಾಗರದಲ್ಲಿ ಮುಳುಗಿರಲಿಲ್ಲ. ಒಂದು ವಿಚಿತ್ರವಾದ ಮಗ್ಗದಮುಂದೆ ಕುಳಿತು ಎಂದೂ ಕಾಣದಂತಹ ಅಂದವಾದ ನೂಲಿನಿಂದ



ನಾಜೂಕಾದ ವಸ್ತ್ರವನ್ನು ನೇಯುತ್ತಿದ್ದಾಳೆ!

ಮಹಾರಾಣಿ ತಲೆ ಎತ್ತಿ ಚಕ್ರವರ್ತಿಯಕಡೆ ನೋಡಿದಳು. ಆಕೆಯ ಕಣ್ಣುಗಳು ಆನಂದ ದಿಂದ ಮಿನುಗುತ್ತಿದ್ದವು. "ಮಹಾಪ್ರಭೂ, ನನ್ನ ಕಳವಳದಿಂದ ನಿಮ್ಮನ್ನು ತುಂಬಾ ವ್ಯಥೆಗೆ ಗುರಿಮಾಡಿದೆ. ಅದಕ್ಕೆ ಪರಿಹಾರವಾಗಿ ನಿಮಗೆ ಈ ದಿವ್ಯ ವಸ್ತ್ರವನ್ನು ನೇದು ಕೊಡು ತ್ತಿರುವೆನು. ಆಗ್ರಹವಿಲ್ಲವಷ್ಟೇ?" ಎಂದಳಾಕೆ.

"ಆಗ್ರಹ! ಇಂತಹ ಅಪೂರ್ವವಾದ ವಸ್ತ್ರವನ್ನು ಬಹುಮಾನ ಪಡೆಯುತ್ತಾ ಆಗ್ರಹಗೊಳ್ಳುವೆನೆ!" ಎಂದ ಚಕ್ರವರ್ತಿ. ಸೀಲಿಂಗ್‌ಷಿ ತನ್ನ ಗಂಡನಿಗೆ ನಡೆದ ವಿಷಯ ವನ್ನೆಲ್ಲಾ ಸವಿವರವಾಗಿ ಹೇಳಿದಳು.

"ತಮ್ಮ ಅರಸಿಯಾಗಿ ನಾನು ಈ ಕೆಲಸ ಮಾಡುವುದು ಉಚಿತವಲ್ಲ. ನಿಮ್ಮ ಘನತೆಗೆ ಕುಂದು. ಆದುದರಿಂದ ಈ ವಿಷಯವನ್ನು ಗೋಪ್ಯವಾಗಿಟ್ಟೆ" ಎಂದಳು ಮಹಾರಾಣಿ.

ನನಗೆ ಅದರಿಂದೇನೂ ಚಿಂತೆಯಿಲ್ಲ. ನಿನ್ನ ಮನಸ್ಸನ್ನು ಉಲ್ಲಾಸಗೊಳಿಸಿದವರಿಗೆ ಅರ್ಧ ರಾಜ್ಯ ಕೊಡಲು ತಯಾರಿದ್ದೆ. ನಿನ್ನ ಚಿಂತೆ ದೂರವಾದುದೇ ನನಗೊಂದು ಸಂತೋಷ" ಎಂದ ಚಕ್ರವರ್ತಿ.

"ಹಾಗಾದರೆ ಸಾವಿರ ಹಿಪ್ಪನೇರಳೆ ಮರಗ ಳಿರುವ ತೋಟವನ್ನು ನನಗೆ ಮಾಡಿಸಿಕೊಡಿ" ಎಂದಳು ರಾಣಿ. ಚಕ್ರವರ್ತಿ ಆಕೆಯ ಕೋರಿಕೆ ಯನ್ನು ನೆರವೇರಿಸಿಕೊಟ್ಟ.

ಪ್ರಪಂಚದಲ್ಲಿ ಮೊಟ್ಟಮೊದಲು ರೇಷಿಮೆ ವಸ್ತ್ರಗಳನ್ನು ನೇತವಳು ಸೀಲಿಂಗ್‌ಷಿ. 'ಸೀ' ಎಂದರೆ ಚೀನೀಭಾಷೆಯಲ್ಲಿ ರೇಷಿಮೆಎಂದರ್ಥ. ಆಕೆಯ ಅನಂತರ ಚೀನಾದೇಶದ ಮಹಾರಾಣಿ ಯರು ಆಕೆ ಏರ್ಪಡಿಸಿದ ಸಂಪ್ರದಾಯವನ್ನು ಅನುಸರಿಸಿ ಪ್ರತಿವರ್ಷ ಒಂದು ದಿನ ರೇಷಿಮೆ ಹುಳಗಳಿಗೆ ತಮ್ಮ ಸ್ವಹಸ್ತದಿಂದ ಆಹಾರ ಕೊಡುತ್ತಿದ್ದರು. ಕಾಲಕ್ರಮೇಣ ರೇಷಿಮೆ ವಸ್ತ್ರಗಳ ರಹಸ್ಯ ಚೀನಾದೇಶದಿಂದ ಇತರ ದೇಶಗಳಿಗೂ ತಿಳಿಯಿತು. ಆದುದರಿಂದಲೇ ನಮ್ಮ ಪೂರ್ವಿಕರು ರೇಷಿಮೆ ವಸ್ತ್ರಗಳಿಗೆ ಚೀನಾಂಬರಗಳೆಂದು ಹೇಳುತ್ತಿದ್ದರು.






ಬ್ರಹ್ಮದತ್ತನು ಕಾಶೀನಗರವನ್ನು ಪರಿಪಾಲಿಸುವ ಕಾಲದಲ್ಲಿ ಒಂದುಸಾರಿ ಬೋಧಿಸತ್ವನು ಆಸ್ಥಾನ ಪುರೋಹಿತನಾಗಿದ್ದನು. ಆತನಿಗೆ ನಾಲ್ಕು ವೇದಗಳೂ, ಆರುಶಾಸ್ತ್ರಗಳೂ, ಹದಿನೆಂಟು ಪುರಾಣಗಳೂ ಬಾಯಿಪಾಠವಾಗಿ ಬರುತಿದ್ದುವು. ಅಷ್ಟೇ ಅಲ್ಲದೆ ಲೋಕವನ್ನು ವಶಪಡಿಸಿಕೊಳ್ಳುವ ಅಪೂರ್ವವಾದ ಒಂದು ಮಹಾಮಂತ್ರವನ್ನು ಸಹ ಆತಕಲಿತಿದ್ದನು.

ಆ ಮಹಾಮಂತ್ರವನ್ನು ಉಚ್ಚರಿಸುವ ಉದ್ದೇಶದಿಂದ ಒಂದುದಿನ ಪುರೋಹಿತನು ಏಕಾಂತ ಸ್ಥಳದಲ್ಲಿ ಒಂದು ಶಿಲಾವೇದಿಕೆಯ ಮೇಲೆ ನಿಷ್ಠನಾಗಿ ಕುಳಿತಿದ್ದ. ಆತನು ಉಚ್ಚರಿಸಿದ ಮಂತ್ರವನ್ನೆಲ್ಲಾ ಪಕ್ಕದ ಪೊದೆಯಲ್ಲಿದ್ದ ಒಂದು ಗಂಡುನರಿ ಕೇಳಿಸಿಕೊಂಡಿತು. ಆ ನರಿ ಸಾಮಾನ್ಯವಾದುದಲ್ಲ. ಹಿಂದಿನ ಜನ್ಮದಲ್ಲಿ ಅದು ಒಂದು ಮಹಾಮಂತ್ರಗಾರ. ಏಕಪಾಠಿ.

ಆದುದರಿಂದ ಒಂದುಸಾರಿ ಕೇಳಿಸಿಕೊಂಡ ಕೂಡಲೇ ಆ ನರಿಗೆ ಪುರೋಹಿತನು ಉಚ್ಚರಿಸಿದ ಮಹಾಮಂತ್ರ ಪೂರ್ತಿಯಾಗಿ ಕಂಠಪಾಠವಾಯಿತು. ತತ್‌ಕ್ಷಣ ಅದು ಅಡವಿಗೆ ಓಡಿಹೋಯಿತು.

ಅಡವಿಯೊಳಕ್ಕೆ ಪ್ರವೇಶಿಸಿದ ಆ ನರಿ ಆ ಮಹಾಮಂತ್ರವನ್ನು ಉಚ್ಚರಿಸಿ, ನೂರಾರು ನರಿಗಳನ್ನು ತನ್ನ ಅಧೀನ ಮಾಡಿಕೊಂಡಿತು. ತರುವಾಯ ಅದು ಮಂತ್ರಪ್ರಭಾವದಿಂದ ಎಲ್ಲಾ ಮೃಗಗಳನ್ನೂ ವಿಧೇಯಪಡಿಸಿಕೊಂಡಿತು. ಅರಣ್ಯದಲ್ಲಿದ್ದ ಆನೆ, ಕುದುರೆ, ಸಿಂಹ, ಜಿಂಕೆ, ಒಂದೇನು ಎರಡೇನು, ಸಮಸ್ತವಾದ ಜಂತುಜಾಲವನ್ನೂ ತನ್ನ ಹತ್ತಿರಕ್ಕೆ ಕರೆಯಿಸಿಕೊಂಡಿತು.

ಜಂತುಗಳೆಲ್ಲಾ ಒಂದುಕಡೆ ಸೇರಿದ ಕೂಡಲೇ ಆ ನರಿ "ಈ ಕ್ಷಣದಿಂದ ನಾನೇ ನಿಮ್ಮ ಪ್ರಭು. ನೀವೆಲ್ಲರೂ ಪ್ರಭುಭಕ್ತಿಯಿಂದ ಇದ್ದರೆ ನಾವು ಅನೇಕ ಘನಕಾರ್ಯಗಳನ್ನು ಸಾಧಿಸಬಹುದು. ಇಂದಿನಿಂದ ನನ್ನ ಹೆಸರು ಶಬ್ದದತ್ತ" ಎಂದು ಹೇಳಿತು.

ಯಚ್. ನಾರಾಯಣರಾವ್

ಆ ಗಂಡುನರಿಯು ಪಕ್ಕದಲ್ಲಿ ಹೆಣ್ಣುನರಿ ರಾಣಿಯಾಗಿ ಕುಳಿತುಕೊಂಡಿತು. ಎರಡು ಆನೆಗಳಮೇಲೆ ಸಿಂಹವು ನಿಂತುಕೊಂಡಿತು. ಆ ಸಿಂಹದಮೇಲೆ ರಾಣಿಯೊಂದಿಗೆ ನರಿ ರಾಯರು ಕುಳಿತರು. ಜಂತುವರ್ಗವೆಲ್ಲಾ ಪ್ರಭುಗಳಿಗೆ ಜಯಕಾರಮಾಡಿದವು. ಹೀಗೆ ಪಟ್ಟಾಭಿಷೇಕ ನಡೆಯಿತು.

ಈ ಪದವಿಯಿಂದ ನರಿರಾಯರಿಗೆ ತೃಪ್ತಿಯಿಲ್ಲದಾಯಿತು. ಬಹಳ ಅಹಂಕಾರ ಬಂದಿತ್ತು. ಈ ಅಡವಿಯಲ್ಲಿ ಬಾಯಿಯಿಲ್ಲದ ನಾಲ್ಕು ಕಾಲಿನ ಜಂತುಸಮುದಾಯವನ್ನು ಅಧೀನಪಡಿಸಿಕೊಳ್ಳುವುದರಲ್ಲಿ ದೊಡ್ಡಸ್ತಿಕೆ ಏನಿದೆ? ಕಾಶೀರಾಜ್ಯವನ್ನು ಜಯಿಸಿದರೆ ಆಗ ಸೈ" ಎಂದು ಯೋಚಿಸಿತು.

ರಾಜ್ಯಕಾಂಕ್ಷೆಯಿಂದ ನರಿರಾಜನು ಒಂದು ದಿನ ಪರಿವಾರ ಸಮೇತವಾಗಿ ಕಾಶೀನಗರದ ಮೇಲೆ ಮುತ್ತಿಗೆಹಾಕಲು ಹೊರಟನು.

ನಗರಕ್ಕೆ ಗಾವುದ ದೂರದಲ್ಲಿ ನರಿರಾಜನು ಬೀಡುಬಿಟ್ಟು, ಕಾಶೀರಾಜನಿಗೆ ಹೀಗೆಂದು ಸುದ್ದಿ ಕಳುಹಿಸಿದ:

"ನಿಮ್ಮರಾಜ್ಯವನ್ನು ನಮಗೆ ಅಧೀನ ಮಾಡಿ, ಇಲ್ಲವಾದರೆ ಯುದ್ಧಕ್ಕೆಬನ್ನಿ"

ಈ ವಾರ್ತೆ ಕಿವಿಗೆ ಬಿದ್ದಕೂಡಲೇ ಕಾಶೀ ನಗರದ ಜನರು ಭಯದಿಂದ ತತ್ತರಿಸಿದರು. ಭೀತಿಯಿಂದ ಪ್ರತಿಯೊಬ್ಬರೂ ಮನೆಯ ಬಾಗಿಲುಗಳನ್ನು ಹಾಕಿಕೊಂಡು ಮನೆಯೊಳಗೇ ಅಡಗಿಕೊಂಡರು.




ಆಗ ಆಸ್ಥಾನ ಪುರೋಹಿತನಾಗಿದ್ದ ಬೋಧಿಸತ್ವನು ರಾಜನ ಹತ್ತಿರಕ್ಕೆ ಹೋಗಿ "ಮಹಾಪ್ರಭೂ, ನೀವೇನೂ ಭಯಪಡಬೇಡಿ. ನರಿರಾಜನವಿಷಯ ನಾನು ನೋಡಿಕೊಳ್ಳುತ್ತೇನೆ. ಅದರ ಕೊಬ್ಬನ್ನು ನಾನು ಇಳಿಸುವೆನು. ಅದನ್ನು ಸೋಲಿಸುವ ರಹಸ್ಯ ನನಗೆಹೊರತು ಮತ್ತೆ ಯಾರಿಗೂ ತಿಳಿಯದು" ಎಂದು ಹೇಳಿದ. ಎಲ್ಲರಿಗೂ ಧೈರ್ಯಬಂತು.

ತರುವಾಯ ಬೋಧಿಸತ್ವನು ಕೋಟೆಯ ಬುರುಜಿನಮೇಲೆ ಹೋಗಿನಿಂತು" ಎಲೈ ಶಬ್ದದತ್ತನೇ, ನೀನು ನಮ್ಮಮೇಲೆ ದಂಡೆತ್ತಿ ಬಂದುದೇನೋಸರಿ. ಆದರೆ ಯಾವರೀತಿ ನಮ್ಮ ರಾಜ್ಯವನ್ನು ವಶಪಡಿಸಿಕೊಳ್ಳುವೆ?" ಎಂದು ನರಿಯನ್ನು ಕೇಳಿದ.

ಅದಕ್ಕೆ ನರಿರಾಜನು "ಅದಕ್ಕೇನು? ನಮ್ಮ ಸಿಂಹಗಳು ಗರ್ಜಿಸಿದರೆ, ನಿಮ್ಮ ಪ್ರಜೆಗಳೂ ಸೈನಿಕರೂ ಹೆದರಿ ಪರಾರಿಯಾಗುವರು. ನಾವು ಸುನಾಯಾಸವಾಗಿ ಕೋಟೆಯನ್ನು ವಶಪಡಿಸಿ ಕೊಳ್ಳುವೆವು" ಎಂದು ಹೇಳಿತು.

ಆಗ ಬೋಧಿಸತ್ವನು "ಅಯ್ಯಾ ಶಬ್ದದತ್ತ. ಏನು ನಿನ್ನ ಭ್ರಮೆ. ಮೃಗರಾಜನಾದ ಸಿಂಹ ನಿನ್ನಂತಹ ಒಂದು ಸಾಮಾನ್ಯ ನರಿಯ ಆಜ್ಞಾನುವರ್ತಿಯಾಗಿ ನೀನು ಗರ್ಜಿಸು ಎಂತೆ ಹೇಳಿದ ಮಾತ್ರಕ್ಕೆ ಆರ್ಭಟಿಸುವುದೇ?" ಎಂದು ಪರಿಹಾಸ್ಯಮಾಡಿದನು.

ಮದವೇರಿದ ನರಿರಾಜನು ಅಹಂಕಾರ ದಿಂದ "ಸಿಂಹಗಳೆಲ್ಲಾ ನನ್ನ ಆಜ್ಞೆಯನ್ನು ಪಾಲಿಸುವುವು. ನೋಡುವೆಯಂತೆ" ಎಂದ.

"ತೋರಿಸು, ಸಾಧ್ಯವಾದರೆ" ಎಂದು ಕೆಣಕಿದ ಬೋಧಿಸತ್ವ.

ತಕ್ಷಣವೇ ಶಬ್ದದತ್ತನು "ಗರ್ಜಿಸು" ಎಂದು ಸಂಜ್ಞೆಮಾಡಿ, ತಾನು ಹತ್ತಿ ಕುಳಿತಿದ್ದ ಆ ಮಹಾಸಿಂಹದ ಬೆನ್ನಿಗೆ ಕಾಲಿನಿಂದ ಒಂದು ಒದೆತ ಕೊಟ್ಟ. ಸಿಂಹವು ಭೂಮಿ ಅದರು ವಂತೆ ಆರ್ಭಟಿಸಿತು. ಸಿಂಹವನ್ನು ಬೆನ್ನಿನ ಮೇಲೆ ನಿಲ್ಲಿಸಿಕೊಂಡಿದ್ದ ಆನೆಗಳು ತಲ್ಲಣಿಸಿ ದೂರಸರಿದವು. ಆಗ ನರಿರಾಜನೂ, ಆತನ ರಾಣಿಯೂ ದುಡುಮ್ಮನೆ ಕೆಳಗೆಬಿದ್ದರು.

ಆ ಗಲಭೆಯಲ್ಲಿ ಆನೆಗಳು ದಿಕ್ಕುಕಾಣದೆ ಅತ್ತಿತ್ತ ಓಡುತ್ತಾ ಹೋದುವು. ನರಿರಾಜನು ಜಜ್ಜಿಬಜ್ಜಿಯಾಗಿ ಸತ್ತುಹೋದನು.

ಈ ಗೊಂದಲದಲ್ಲಿ ಆನೆಗಳಷ್ಟೇ ಅಲ್ಲ, ಉಳಿದ ಜಂತುಜಾಲಗಳೂ ಒಂದರಮೇ ಲೊಂದು ಬಿದ್ದು ತುಳಿದಾಟದಲ್ಲಿ ಬಹು ಮಟ್ಟಿಗೆ ನಾಶವಾದವು. ಸಾಯದೆ ಉಳಿದ ಕೆಲವು ಪ್ರಾಣಿಗಳು ಗುಟುಕು ಜೀವದೊಂದಿಗೆ ಅರಣ್ಯವನ್ನು ಸೇರಿಕೊಂಡವು. ನಾಲ್ಕು ಗಾವುದದಷ್ಟು ಪ್ರದೇಶ ಪ್ರಾಣಿಗಳ ಶವಗ ಳಿಂದ ತುಂಬಿಹೋಯಿತು. "ಇನ್ನೇನೂ ಭಯ ವಿಲ್ಲ. ಮದವೇರಿದ ನರಿ ಸತ್ತಿತು. ಪ್ರಜೆಗ ಳೆಲ್ಲಾ ನೆಮ್ಮದಿಯಾಗಿರಬಹುದು" ಎಂದು ಬೋಧಿಸತ್ವನು ಡಂಗುರ ಸಾರಿಸಿದ.





# ಪ್ರಾಯಶ್ಚಿತ್ತ

ಅನೇಕ ವರ್ಷಗಳ ಹಿಂದೆ ಬಾಗದಾದ್ ನಗರದಲ್ಲಿ ಆಲಿ ಎಂಬ ನಾಪಿತನಿದ್ದನು. ಅವನು ಇತರ ಸಾಮಾನ್ಯ ನಾಯಿಂದರಂತೆ ಅಲ್ಲ. ಕ್ಷೌರ ಮಾಡುವುದರಲ್ಲಿ ಆತನು ತುಂಬಾ ಚತುರನು. ಅವನು ಕಣ್ಣು ಮುಚ್ಚಿಕೊಂಡು ಸಹ ತಲೆಯಮೇಲಿನ ಕೂದಲನ್ನು ಬೋಳಿಸುವನು. ಒಂದು ಗಾಯವಾದರೂ ಆಗುತ್ತಿರಲಿಲ್ಲ. ಬಾಗದಾದಿನಲ್ಲಿದ್ದ ಪ್ರತಿ ಧನಿಕನೂ, ಗಣ್ಯವ್ಯಕ್ತಿಯೂ ಆಲಿಯ ಹತ್ತಿರಕ್ಕೆ ಹೋಗಿ ಕ್ಷೌರ ಮಾಡಿಸಿಕೊಳ್ಳುತ್ತಿದ್ದರು.

ಒಂದುದಿನ ಆಲಿಯ ಮನೆಗೆ ಅಡಿಗೆ ಮಾಡಲು ಸೌದೆ ಬೇಕಾಗಿಬಂತು. ಆದುದರಿಂದ ಅವನು ಸೌದೆಯವನಿಗಾಗಿ ಎದುರು ನೋಡುತ್ತಾ ಮನೆಯ ಮುಂದೆ ನಿಂತುಕೊಂಡಿದ್ದ. ಸ್ವಲ್ಪ ಹೊತ್ತಿಗೆ ಸೌದೆಯವನೊಬ್ಬನು ಕತ್ತೆಯಮೇಲೆ ಸೌದೆಯ ಹೊರೆ ಹೇರಿಕೊಂಡು ಆ ಮಾರ್ಗವಾಗಿ ಬಂದ. ಆಲಿ ಅವನನ್ನು ಕರೆದು "ನನಗೆ ವಾದಕ್ಕೆ ಸಮಯವಿಲ್ಲ. ಆ ಕತ್ತೆಯ ಮೇಲಿರುವ ಯಾವತ್ತು ಸೌದೆಯನ್ನು ಐದು ರೂಪಾಯಿಗಳಿಗೆ ಕೊಡುವೆಯಾ?" ಎಂದು ಕೇಳಿದ.

ಬಾಗದಾದಿನಲ್ಲಿ ಸೌದೆಗೆ ಬಹಳ ಗಿರಾಕಿ. ಸುಲಭವಾಗಿ ಸೌದೆ ಸಿಗುತ್ತಿರಲಿಲ್ಲ. ಆದರೂ ಆ ಸೌದೆಯವನು ಆಲಿ ದೊಡ್ಡ ಗಿರಾಕಿ ಎಂದು, ಐದು ರೂಪಾಯಿಗೆ ಸೌದೆ ಕೊಡಲು ಒಪ್ಪಿಕೊಂಡ. ಅವನು ಕತ್ತೆಯಮೇಲಿದ್ದ ಕಟ್ಟಿಗೆಯನ್ನೆಲ್ಲಾ ಇಳಿಸಿ, ಹಣ ಕೇಳಿದ.

"ಕತ್ತೆಯಮೇಲಿರುವ ಯಾವತ್ತೂ ಸೌದೆಯನ್ನು ಇಳಿಸಿಲ್ಲ ನೀನು. ಆ ಮರದಜೀನಿನ ಮಾತೇನು? ಅದನ್ನೂ ಸೇರಿಸಿ ವ್ಯಾಪಾರ ಮಾಡಿದೆ" ಎಂದ ಆಲಿ.

"ಅದು ಹೇಗೆ?" ಎಂದ ಸೌದೆಯವನು.

"ಆ ಜೀನು ಮರದ್ದಲ್ಲವೇ? ಕತ್ತೆಯ ಮೇಲಿರುವ ಕಟ್ಟಿಗೆ ಯಾವತ್ತೂ ಐದು ರೂಪಾಯಿಗೆ ವ್ಯಾಪಾರ ಮಾಡಿದೆನಲ್ಲ?" ಎಂದ ಆಲಿ.

"ಇದು ಸರಿಯಲ್ಲ. ಇದಕ್ಕೆ ನಾನು ಖಂಡಿತ

ಸಿ. ಕಮಲಾ



ಒಪ್ಪುವುದಿಲ್ಲ" ಎಂದ ಸೌದೆಯವನು. ಆಲಿಗೆ ಬಹಳ ಕೋಪ ಬಂತು. ಸೌದೆ ಮಾರುವವನ ಕಪಾಳಕ್ಕೆ ಎರಡು ಬಿಗಿದು, ಆ ಮರದಜೀನನ್ನೂ ಕಿತ್ತುಕೊಂಡು, ಅವನನ್ನು ಅಲ್ಲಿಂದ ಓಡಿಸಿದ.

ಕಟ್ಟಿಗೆಯವನು ನ್ಯಾಯಾಧಿಕಾರಿಯ ಹತ್ತಿರಕ್ಕೆ ಹೋಗಿ ನಡೆದ ವಿಷಯವನ್ನೆಲ್ಲಾ ಹೇಳಿದ. ಆದರೆ ಆ ನ್ಯಾಯಾಧಿಕಾರಿಗೆ ಕ್ಷೌರ ಮಾಡುವವನು ಆಲಿಯೇ ಆದುದರಿಂದ ಆತನು ಕಟ್ಟಿಗೆಯವನ ಮೊರೆ ಕೇಳಿಸಿಕೊಳ್ಳಲಿಲ್ಲ. ಅಲ್ಲದೆ ಎಲ್ಲಾ ಅಧಿಕಾರಿಗಳಿಗೂ ಆಲಿಯೇ ನಾಯಿಂದ. ಕಟ್ಟಿಗೆಯವನ ಗೋಳಿಗೆ ಯಾರೂ ಕಿವಿಗೊಡಲಿಲ್ಲ. "ಅಯ್ಯೋ ಬಡವನಿಗೆ ಯಾರೂ ಸಹಾಯ ಮಾಡುವುದಿಲ್ಲ, ನನ್ನ ಗತಿ ಇಷ್ಟೇ" ಎಂದುಕೊಂಡು ಕಟ್ಟಿಗೆಯವನು ಅತ್ಯಂತ ದುಃಖಿತನಾಗಿ ಮನೆಯ ದಾರಿ ಹಿಡಿದ. ಅವನಿಗೆ ದಾರಿಯಲ್ಲಿ ಒಬ್ಬ ಮುದುಕನು ಸಿಕ್ಕಿದ. ಆತನು "ಏಕಣ್ಣಾ, ಏನೋ ಚಿಂತಾಕ್ರಾಂತನಾಗಿರುವಂತಿದೆ" ಎಂದು ವಿಷಯವನ್ನು ಕೇಳಿ ತಿಳಿದ.

"ಈ ಮಾತ್ರಕ್ಕೆ ಹೀಗೆ ಬೇಸರಪಟ್ಟುಕೊಳ್ಳುವುದೇ? ನೀನು ನಮ್ಮ ಕಲೀಫರ ಹತ್ತಿರಕ್ಕೆ ಹೋಗಿ ಹೇಳಿಕೊಂಡರೆ ನಿನಗೆ ನ್ಯಾಯ ಸಿಗುವುದು ಖಂಡಿತ" ಎಂದು ಸಲಹೆ ಕೊಟ್ಟ, ಆ ಮುದುಕ.

ಕಟ್ಟಿಗೆಯವನು ಮುದುಕನಿಗೆ ಮೂರು ಸಾರಿ ಸಲಾಮು ಮಾಡಿ ರಾಜಭವನಕ್ಕೆ ಹೋದ. ಅವನಿಗೆ ಕಲೀಫರ ದರ್ಶನ ಲಭಿಸಿತು. ಅವನು ಕಲೀಫರನ್ನು ಸಮೀಪಿಸಿ, ಆತನ ಪಾದಗಳ ಹತ್ತಿರ ನೆಲವನ್ನು ಮುಟ್ಟಿ ಮೂರು ಸಲಾಮು ಮಾಡಿದ. ಕಲೀಫರು ಬಂದ ಕಾರ್ಯವನ್ನು ವಿಚಾರಿಸಿದರು. ಸೌದೆಯವನು ತನ್ನ ಕಥೆಯನ್ನು ಅವರಿಗೆ ಹೇಳಿದ.

"ಒಂದು ಉಪಾಯವನ್ನು ಹೇಳುವೆನು. ಇಲ್ಲಿ ಬಾ" ಎಂದು ಕಲೀಫರು ಕಟ್ಟಿಗೆಯವನ ಕಿವಿಯಲ್ಲಿ ಏನೋ ರಹಸ್ಯವಾಗಿ ಹೇಳಿದರು. ಕಟ್ಟಿಗೆಯವನು ಕಲೀಫರಿಗೆ ಮತ್ತೊಮ್ಮೆ ಮೂರು ಸಲಾಮು ಹೊಡೆದು, ನಗುತ್ತಾ ಮನೆಗೆ ಹಿಂತಿರುಗಿದ.

ಕೆಲವು ದಿವಸಗಳನಂತರ ಸೌದೆಯವನು ನಾಪಿತ ಆಲಿಯ ಹತ್ತಿರಕ್ಕೆ ಹೋಗಿ "ನನಗೂ

ನನ್ನ ಸ್ನೇಹಿತನಿಗೂ ಕ್ಷೌರಮಾಡಲು ಎಷ್ಟು ತೆಗೆದುಕೊಳ್ಳುವೆ?" ಎಂದು ಕೇಳಿದ.

"ಎರಡುರೂಪಾಯಿ ಕೊಟ್ಟರೆ ನಿಮ್ಮಿಬ್ಬರಿಗೂ ಕ್ಷೌರ ಮಾಡುತ್ತೇನೆ" ಎಂದ ಆಲಿ.

"ಸರಿ, ಒಳ್ಳೆಯದು. ಮೊದಲು ನನಗೆ ಕ್ಷೌರಮಾಡು" ಎಂದ ಕಟ್ಟಿಗೆಯವನು.

ಅವನ ತಲೆ ನುಣ್ಣಗೆ ಬೋಳಿಸಿದನಂತರ ಆಲಿ "ನಿನ್ನ ಗೆಳೆಯನೆಲ್ಲಿ?" ಎಂದು ಕೇಳಿದ.

"ಹೊರಗೆ ಇರಬಹುದು. ಒಳಕ್ಕೆ ಕರೆದುಕೊಂಡು ಬರುವೆನು" ಎಂದು ಹೇಳಿ ಕಟ್ಟಿಗೆಯವನು ಹೊರಗೆ ಬಂದು, ತನ್ನ ಕತ್ತೆಯೊಂದಿಗೆ ಮತ್ತೆ ಒಳಗೆ ಪ್ರವೇಶಿಸಿದ.

"ಏನು! ಕತ್ತೆಗೆ ಕ್ಷೌರಮಾಡಲೇ?" ಎಂದು ಕಿಡಿಕಿಡಿಯಾದ ಆಲಿ. ಕಟ್ಟಿಗೆಯವನಿಗೆ ಕ್ಷೌರಮಾಡುವುದೇ ತನ್ನ ಅಂತಸ್ತಿಗೆ ಕುಂದೆಂತಲೂ, ತಕ್ಷಣ ಅಲ್ಲಿಂದ ಹೊರಟು ಹೋಗದಿದ್ದರೆ ಅವನನ್ನು ಸುಣ್ಣದ ನೀರಿನಲ್ಲಿ ಹಾಕಿ ಸಾಯಿಸುವೆನೆಂತಲೂ ಬೆದರಿಸಿದ.

ಕೂಡಲೇ ಕಟ್ಟಿಗೆಯವನು ಕಲೀಫರಲ್ಲಿಗೆ ಹೋಗಿ ನಾಯಿಂದ ಆಲಿಯಮೇಲೆ ಫಿರ್ಯಾದು ಮಾಡಿದ. ಫಿರ್ಯಾದು ಕೇಳಿ ಕಲೀಫರು ಆಲಿಯನ್ನು ಕರೆಸಿದರು.

ಆಲಿ ನೆಲಮುಟ್ಟಿ ಸಲಾಮು ಮಾಡಿ "ಮಹಾಸ್ವಾಮಿಯವರ ಮಾತು ಸತ್ಯವೇ ಆದರೂ, ಮನುಷ್ಯನಿಗೆ ಕತ್ತೆ ಗೆಳೆಯನಾಗುವುದೂ, ಕತ್ತೆಗೆ ಕ್ಷೌರಮಾಡುವುದೂ ಎಲ್ಲಿಯಾದರೂ ಉಂಟೆ?" ಎಂದು ಕೇಳಿದ.

"ನೀನು ಹೇಳಿದ ಮಾತು ನಿಜ. ಒಪ್ಪಿಕೊಂಡೆ. ಆದರೆ ಸೌದೆಯ ಬಾಬತ್ತು ಎಂದು ಹೇಳಿ ಮರದಜೀನನ್ನು ಎಲ್ಲಿಯಾದರೂ ಕೇಳುವರೇ? ಕೂಡಲೇ ಈ ಕತ್ತೆಗೆ ಕ್ಷೌರಮಾಡು" ಎಂದು ಕಲೀಫರು ಆಜ್ಞಾಪಿಸಿದರು.

ಆಲಿ ಕ್ಷೌರ ಮಾಡಲೇಬೇಕಾಯಿತು. ಅವನು ಕತ್ತೆಯ ಮೈಗೆ ಸಾಬೂನು ತಿಕ್ಕಿ ಕ್ಷೌರಮಾಡುತ್ತಿರಲು ಸಭಾಸದರು ಹೊಟ್ಟೆ ಹುಣ್ಣಾಗುವಂತೆ ನಗುತ್ತಿದ್ದರು. ಆಲಿಯ ಗೌರವವೆಲ್ಲಾ ಮಣ್ಣುಪಾಲಾಯಿತು.

ತರುವಾಯ ಕಲೀಫರು ಕಟ್ಟಿಗೆಯವನಿಗೆ ಸ್ವಲ್ಪ ಹಣವನ್ನು ಬಹುಮಾನವಾಗಿ ಕೊಟ್ಟು ಕಳುಹಿಸಿದರು.






# ಧುಮುಕುತ್ತೇನೆ.....!

ಹರಿಹರಪುರವೆಂಬ ಊರಿನಲ್ಲಿ ಅಯ್ಯಪ್ಪನ ದೇವಾಲಯವಿತ್ತು. ಅಯ್ಯಪ್ಪದೇವನು ತುಂಬಾ ಮಹಿಮೆಯುಳ್ಳವನೆಂದು ಪ್ರತೀತಿ. ಕೆಲಕಾಲವಾದನಂತರ ಕಾರಣಾಂತರದಿಂದ ಆ ದೇವನಿಗೆ ಪೂಜೆ ಪುನಸ್ಕಾರಗಳು ಇಲ್ಲದಂತಾಗಿ ಗುಡಿ, ಕ್ರಮೇಣ ಶಿಥಿಲವಾಯಿತು. ಆ ಗುಡಿಯ ಆವರಣ, ದೇವಾಲಯದ ತೋಟ ಎಲ್ಲಾ ಸೇರಿ ಸುಮಾರು ಒಂದು ಎಕರೆಯಷ್ಟು ಭೂಮಿ ಪಾಳುಬಿದ್ದಿತ್ತು.

ಆ ನೆಲ ದೇವರ ಸ್ವತ್ತು ಆದುದರಿಂದ ದುರುಪಯೋಗ ಮಾಡಲು ಪ್ರಜೆಗಳು ಹೆದರುತ್ತಿದ್ದರು. ಆದರೆ ಆ ಪ್ರದೇಶದಮೇಲೆ ಶಾನುಭಾಗರ ಕಣ್ಣುಬಿತ್ತು. ಅವರಿಗೆ ಬೇಕಾದಷ್ಟು ಜನಬಲ, ಹಣಬಲಗಳಿದ್ದವು. ಆತನನ್ನು ಎದುರಿಸುವ ಆಳು ಅಲ್ಲಿ ಮಾತ್ರವೇ ಅಲ್ಲ ಸುತ್ತಮುತ್ತಲಿದ್ದ ಹಳ್ಳಿಗಳಲ್ಲೂ ಇರಲಿಲ್ಲ!

ಆ ಧಿಮಾಕಿನಿಂದ ಶಾನುಭಾಗರು ದೇವಾಲಯದ ಸ್ವತ್ತನ್ನು ಆಕ್ರಮಿಸಿ, ಒಂದು ಭವ್ಯ ಭವನವನ್ನು ನಿರ್ಮಿಸಿದರು. ಒಂದು ಏಕಾದಶಿಯದಿನ ಅತಿ ವೈಭವದಿಂದ ನೂತ್ರನ ಗೃಹಪ್ರವೇಶ ಮಾಡಿದರು. ಅಂದು ಅನ್ನ ಸಂತರ್ಪಣೆ, ಸಮಾರಾಧನೆಗಳು ನಡೆದವು. ಬೆಳಗಿನಿಂದ ಕೆಲಸ ಮಾಡಿ ಮನೆಯವರೆಲ್ಲಾ ಬಳಲಿದ್ದರು. ಅದರಿಂದಾಗಿ ಅವರೆಲ್ಲಾ ಬಹು ಬೇಗನೆ ನಿದ್ದೆಮಾಡಿದರು. ಆದರೆ ಶಾನುಭಾಗರಿಗೆ ಮಾತ್ರ ನಿದ್ದೆ ಬರಲೊಲ್ಲದು. ಅರ್ಧರಾತ್ರಿಯಲ್ಲಿ 'ಧುಮುಕುತ್ತೇನೆ, ಧುಮುಕುತ್ತೇನೆ' ಎಂಬ ಶಬ್ದ ಮನೆಯ ಸೂರಿನಿಂದ ಕೇಳಿಸಿತು.

ಶಾನುಭಾಗರು ಗಡಗಡ ನಡುಗಿದರು. "ಬೇಡ ಮಹಾರಾಯ ಬೇಡ" ಎಂದು ಹೇಳುತ್ತಾ ಹಾಸಿಗೆಯಿಂದ ಎದ್ದರು. ಇದು ಯಾವುದೋ ಗೃಹದೇವತೆ ಮಾತನಾಡುತ್ತಿರಬಹುದೆಂದು ಭಾವಿಸಿದರು. ಮನೆ ಕುಸಿದು ಬೀಳುವುದೇನೋ ಎಂದು ಭಯಗೊಂಡರು. ಮನೆಯವರೆಲ್ಲರನ್ನೂ ಎಬ್ಬಿಸಿ, ಯಾರಿಗೂ ತಿಳಿಯದಂತೆ ಮತ್ತೆ ತಮ್ಮ ಹಳೆ ಮನೆಯನ್ನು

ಎಚ್. ಬಸವರಾಜ





ಸೇರಿಕೊಂಡರು. ಹೀಗಾದುದನ್ನು ನೋಡಿ 'ಇದೆಲ್ಲಾ ಅಯ್ಯಪ್ಪದೇವನ ಮಹಿಮೆ. ದೇವರ ಸ್ವತ್ತು ಅಪಹರಿಸಿದರೆ ಏನಾಗುವುದು ಮತ್ತೆ? ತಕ್ಕಶಾಸ್ತಿಆಯಿತು' ಎನ್ನುತ್ತಿದ್ದರು ಕೆಲವರು. ಶಾನುಭಾಗರು ಆಸೆಪಟ್ಟು ಮನೆಯನ್ನು ಕಟ್ಟಿಸಿಕೊಂಡರೇ ಹೊರತು ಅದನ್ನು ಅನುಭವಿಸಲು ಕೇಳಿಕೊಂಡು ಬರಲಿಲ್ಲ. ನಂತರ ಆ ಮನೆಯಕಡೆ ಕಾಲೂ ಇಡಲಿಲ್ಲ ಶಾನುಭಾಗರು. ಆದುದರಿಂದ ಅಯ್ಯಪ್ಪನ ದೇವಾಲಯದಂತೆಯೇ ಶ್ಯಾನುಭಾಗರ ಭವನಕ್ಕೂ ಸಹ ಬಾಗಿಲು ಬಡಿದಿತ್ತು. ಹೀಗೆ ಮಾಸಗಳು, ವರ್ಷಗಳು ಕಳೆದುಹೋದುವು.

ಹೀಗಿರುವಲ್ಲಿ ಒಂದು ದಿನ ಆ ಊರಿಗೆ ಬಡವನೊಬ್ಬನು ಕೆಲಸ ಹುಡುಕಿಕೊಂಡು ಬಂದ. ಅವನಿಗೆ ಒಪ್ಪೊತ್ತು ಊಟಕ್ಕೂ ಗತಿಯಿರಲಿಲ್ಲ. ತಲೆಮರೆಯಿಸಿಕೊಳ್ಳಲು ಒಂದು ಜಾಗವಿರಲಿಲ್ಲ. ಸ್ವಲ್ಪ ಜಾಗ ಕೊಡಿ ಎಂದು ಅನೇಕರನ್ನು ಬೇಡಿದ. ಅವರು ಶಾನುಭಾಗರ ಮನೆಕಡೆ ಬೆರಳು ತೋರಿಸುತ್ತಿದ್ದರು.

ಶಾನುಭಾಗರ ಮನೆಗೆ ಹೋಗಿ ಅವರಿಗೆ ತನ್ನ ಅವಸ್ಥೆ ಹೇಳಿಕೊಂಡನು. ತಮ್ಮ ಹೊಸ ಮನೆಯಲ್ಲಿ ಯಾರಾದರೂ ದಿನಾ ದೀಪಹಚ್ಚಿ ವಾಸಮಾಡುತ್ತಿದ್ದರೆ ಸಾಕೆಂದೆಣಿಸಿದ್ದ ಶಾನುಭಾಗರು ತುಸ ಬಿಂಕದಿಂದಲೇ 'ಸರಿಯಪ್ಪ. ದೇವಾಲಯದ ಹತ್ತಿರ ನನ್ನದೊಂದು ಭಾರಿ ಭವನವಿದೆ. ಅಲ್ಲಿ ಹೋಗಿರು. ಮೊದಲನೇ ತಿಂಗಳು ನೀನೇನೂ ಬಾಡಿಗೆ ಕೊಡಬೇಡ. ಆ ಮುಂದಿನ ತಿಂಗಳಿಂದ ನಾಲ್ಕು ರೂಪಾಯಿ ಬಾಡಿಗೆ ಕೊಡಬೇಕು' ಎಂದರು. ಆ ಮನೆಯಲ್ಲಿ ತಮಗೆ ಆದ ಅನುಭವದ ವಿಷಯ ಪ್ರಸ್ತಾಪನೆ ಮಾಡಲಿಲ್ಲ. ಈ ವ್ಯವಸ್ಥೆಗೆ ಬಡವನು ಆನಂದಿಸಿದನು. ಹೆಂಡತಿ ಮಕ್ಕಳೊಂದಿಗೆ ಅಂದೇ ಆ ಮನೆಯಲ್ಲಿ ಪ್ರವೇಶ ಮಾಡಿದನು. ಅಂದು ಏಕಾದಶಿ.

ತಲೆ ಮರೆಯಿಸಿಕೊಳ್ಳಲೇನೋ ಉತ್ತಮ ಜಾಗ ಸಿಕ್ಕಿದಂತಾಯಿತು. ಆದರೆ ಅನ್ನ? ತಿಂಡಿತೀರ್ಥಗಳಿಲ್ಲದೆ ಹಸಿವಿನ ಬಾಧೆಯಿಂದ ಮಕ್ಕಳು ಸುಮ್ಮನೆ ಗಲಾಟೆಮಾಡ ಹತ್ತಿದವು. ನೆಟ್ಟಗೆ ಎದ್ದು ಪೇಟೆಗೆ ಹೋದ. ಎಷ್ಟೇ ಪ್ರಯತ್ನಪಟ್ಟರೂ ಒಂದು ಕೆಲಸವೂ ಸಿಕ್ಕದಾಯಿತು. ಅಲೆದು ಅಲೆದು ಸಾಯಂಕಾಲ



ಮನೆಗೆ ಹಿಂತಿರುಗಿದ. ಈ ಪರಿಸ್ಥಿತಿಯಿಂದ ಅವನಿಗೆ ಜೀವನದಲ್ಲಿ ವಿರಕ್ತಿ ಯುಂಟಾಯಿತು. ತಾನೂ, ತನ್ನ ಕುಟುಂಬವೂ ಒಂದೇ ಸಾರಿ ಸತ್ತುಹೋದರೆ ಒಳ್ಳೆಯದೆನ್ನುವ ಮಟ್ಟಿಗೆ ಅವನಿಗೆ ವೈರಾಗ್ಯ ಉಂಟಾಯಿತು.

ಹಸಿವಿನ ಬಾಧೆಯಿಂದ ಅವನೂ, ಅವನ ಮಡದಿಮಕ್ಕಳೂ ಹಳಹಳಿಸುತ್ತಿದ್ದರು. ಅರ್ಧ ರಾತ್ರಿ ಸಮಯಕ್ಕೆ ಸರಿಯಾಗಿ ಮನೆಯ ಸೂರಿನಿಂದ 'ಧುಮುಕುತ್ತೇನೆ, ಧುಮುಕುತ್ತೇನೆ' ಎಂಬ ಮಾತುಗಳು ಅವನಿಗೆ ಕೇಳಿಸಿದವು. ಕೂಡಲೇ ಆತನು ಇದು ದೆವ್ವದ ಮನೆ ಯಿರಬೇಕೆಂದು ಊಹಿಸಿದ. ಅವನಿಗೆ ಅಧೈರ್ಯ ವುಂಟಾಗುವ ಬದುಲು ಸಂತೋಷವಾಯಿತು. ಒಂದೇಸಾರಿ ಸೂರು ಕಳಚಿ ಬಿದ್ದರೆ ತಾನೂ ತನ್ನ ಸಂಸಾರವೂ ಈ ಹಾಳು ಪ್ರಪಂಚದಿಂದ ಮುಕ್ತರಾಗಬಹುದು! ಅವನು ದಿಟ್ಟತನದಿಂದ "ಧುಮುಕು, ಪೀಡೆ ಕಳೆದು ಹೋಗುತ್ತದೆ" ಎಂದು ಕಿರಿಚಿದ.

ತಕ್ಷಣ ಮನೆಯವರಿಗೆಲ್ಲಾ ಅಚ್ಚರಿಯುಂಟಾಗುವಂತೆ ವರಹಗಳು ತುಂಬಿದ್ದ ಒಂದು ಚೀಲ ಮೇಲಿಂದ ಕೆಳಗೆ ಬಿತ್ತು. ಅದು ಬಿದ್ದಾಗ "ಅಪ್ಪಾ, ನೀನೂ ನಿನ್ನ ಕುಟುಂಬವೂ ನಿರಾಹಾರಿಗಳಾಗಿದ್ದುದರಿಂದ ಇಂದು ನಿಮಗೆ ಏಕಾದಶಿ ಪ್ರತಿಫಲವು ದಕ್ಕಿತು. ಪ್ರತಿ ಏಕಾದಶಿಯಂದು ಉಪವಾಸ ಮಾಡಿ, ಭಕ್ತಿಯಿಂದ ನನ್ನನ್ನು ಪೂಜಿಸಿದರೆ, ಅಯ್ಯಪ್ಪದೇವನು ನಿಮಗೆ ಶುಭಮಾಡುವನು"

ಎಂದು ಅಶರೀರವಾಣಿ ಕೇಳಿಬಂತು. ಬಡವನೂ ಅವನ ಮಡದಿ ಮಕ್ಕಳೂ ಅಯ್ಯಪ್ಪ ದೇವರಿಗೆ ನಮಸ್ಕಾರ ಮಾಡಿದರು.

ತಮ್ಮ ಅದೃಷ್ಟ ಕಣ್ಣಾದುದಕ್ಕೆ ಅವರು ಉಬ್ಬಿಹೋದರು. ಚೀಲದಲ್ಲಿದ್ದ ನೂರು ವರಹಗಳನ್ನು ವೆಚ್ಚಮಾಡಿಕೊಂಡು ಸುಖವಾಗಿ ಕಾಲಹರಣ ಮಾಡುತ್ತಿದ್ದರು. ಪ್ರತಿ ಏಕಾದಶಿಯ ದಿನದಂದು ಇದೇರೀತಿ ಹಣ ಲಭಿಸುತ್ತಿದ್ದುದರಿಂದ ಅವರು ಐಶ್ವರ್ಯವಂತರಾದರು.

ಒಂದುದಿನ ಶಾನುಭಾಗರಿಗೆ ಬಡವನನ್ನು ವಿಚಾರಿಸಿಕೊಂಡು ಬರಬೇಕೆಂಬ ಕುತೂಹಲವುಂಟಾಯಿತು. ನೆಟ್ಟಗೆ ಅವರ ಮನೆಗೆ ಹೋದರು. ತನಗೆ ಆಶ್ರಯ ನೀಡಿದ ಶಾನುಭಾಗರನ್ನು ಕಂಡು, ಬಡವನು ಅತಿ ವಿನಯ ಮತ್ತು ಆದರದಿಂದ ಬರಮಾಡಿಕೊಂಡು ಉಚಿತ ರೀತಿಯಲ್ಲಿ ಸತ್ಕರಿಸಿದನು.

ಆ ಬಡವನು ಸಿರಿಸಂಪತ್ತಿನಲ್ಲಿ ಓಲಾಡುತ್ತಿರುವುದು ಶಾನುಭಾಗರಿಗೆ ಆಶ್ಚರ್ಯವನ್ನು ಉಂಟುಮಾಡಿತು. "ಹೇಗೆ ಇಷ್ಟೊಂದು ಹಣಗಳಿಸಿದೆ?" ಎಂದು ಕೇಳಿದರು. ಬಡವನು ಕಪಟವಿಲ್ಲದೆ ನಡೆದುದನ್ನೆಲ್ಲಾ ತಿಳಿಸಿದನು.

ಈ ವಿಷಯ ತಿಳಿದ ಕೂಡಲೇ ಶಾನುಭಾಗರಿಗೆ ಅಸೂಯೆ ಉಂಟಾದುದು ಮಾತ್ರವೇ ಅಲ್ಲದೆ ದುರ್ಬುದ್ಧಿ ಸಹ ಜನಿಸಿತು. "ಎಲವೋ ಅಣ್ಣಾ, ನೀನು ಈ ಮನೆಯಲ್ಲಿ ಕಾಲಿಟ್ಟ ದಿನದಿಂದ ಮನೆಗೆ ಬಾಡಿಗೆ ಸಲ್ಲಿಸಲೇಬೇಕು. ಅಷ್ಟೇ ಅಲ್ಲ, ಈ ಸಿರಿಯೆಲ್ಲಾ ನನ್ನ ಮನೆಯಲ್ಲೇ ಲಭಿಸಿದುದರಿಂದ ನನಗೇ ಸೇರಬೇಕು. ಈ ವಿಷಯ ಮತ್ತೆ ಯಾರಲ್ಲಿಯಾದರೂ ಹೇಳಿಗೀಳೀಯೇ? ಹುಷಾರ್" ಎಂದು ಬೆದರಿಸಿ, ಆ ತಿಂಗಳ ಕೊನೆಯ ಹೊತ್ತಿಗೆ ಆ ಮನೆ ಬಿಟ್ಟುಕೊಡಬೇಕೆಂದು ಆಜ್ಞಾಪಿಸಿ ತಮ್ಮ ಮನೆಗೆ ತೆರಳಿದರು. ಆ ಬಡವನು ಮನೆಯನ್ನು ಖಾಲಿ ಮಾಡಲೇ ಬೇಕಾಯಿತು.



ಈಸಾರಿ ಶಾನುಭಾಗರು ತಮ್ಮ ಆ ಹೊಸ ಭವನದಲ್ಲಿ ಧೈರ್ಯದಿಂದ ಕಾಲಿಟ್ಟರು. ಮತ್ತೆ ಏಕಾದಶಿ ಬಂತು. ಅಂದು ರಾತ್ರಿಯೆಲ್ಲಾ ಅವರು ಜಾಗರಣೆಮಾಡಿ, ಕುಟುಂಬ ಸಮೇತವಾಗಿ ಭಕ್ತಿರಸಪೂರ್ಣವಾದ ಕೀರ್ತನೆಗಳನ್ನು ಹಾಡುತ್ತಿದ್ದರು. ಅರ್ಧರಾತ್ರಿ ಸಮಯದಲ್ಲಿ "ಧುಮುಕುತ್ತೇನೆ, ಧುಮುಕುತ್ತೇನೆ"

ಎಂಬ ದನಿ ಮನೆಯ ಮೇಲಿಂದ ಕೇಳಿಸಿತು. ಕೂಡಲೇ ಶಾನುಭಾಗರು "ಧುಮುಕು, ನಿನಗಾಗಿಯೇ ಕಾದುಕೊಂಡು ಕುಳಿತಿದ್ದೇನೆ" ಎಂದರು. ಅಷ್ಟರಲ್ಲಿ ಮೇಲಿಂದ ಒಂದು ಚೀಲ ಕೆಳಗೆ ಬಿತ್ತು. ಆತುರದಿಂದ ಅದನ್ನು ಬಿಚ್ಚಿ ನೋಡಲು ಅದರಿಂದ ನೂರಾರು ಚೇಳುಗಳು ಹೊರಬಿದ್ದು ಸರಿದಾಡ ಹತ್ತಿದುವು.

ಆಗ ಆಕಾಶವಾಣಿ "ಎಲವೋ ದುರುಳನೇ, ಧನಾಶೆಯ ನಿನಗೆ ಲಭಿಸಿದ ಏಕಾದಶಿ ಫಲವಿದೇ! ನೀನು ಬಡವನಿಗೆ ಕೊಟ್ಟ ಮಾತನ್ನು ಉಳಿಸಿಕೊಂಡೆಯಾದರೆ ಸುಖಪಡುವೆ. ಇಲ್ಲದಿದ್ದರೆ ಹಾವುಗಳೂ ಸಹ ಕಾಣಿಸಿಕೊಳ್ಳುವವು. ಇದು ಅಯ್ಯಪ್ಪನ ಮಹಿಮೆ. ಎಚ್ಚರವಾಗಿ ವರ್ತಿಸು" ಎಂದು ಹಿತವಚನ ನುಡಿಯಿತು.

ಮರುದಿನ್ನವೇ ಶಾನುಭಾಗರು ತಮಗೆ ಈ ಮನೆ ಹೊಂದಿ ಬರಲಿಲ್ಲವೆಂದುಕೊಂಡು ತಮ್ಮ ಹಳೆಯ ಮನೆಗೆ ಹಿಂತಿರುಗಿದರು. ಬಡವನಿಗೆ ಸುದ್ಧಿ ಕುಳುಹಿಸಿ, ಅವನನ್ನು ಬರಮಾಡಿಕೊಂಡು ಹಿಂದಿನ ದಿನ ನಡೆದುದನ್ನೆಲ್ಲಾ ಕಪಟವಿಲ್ಲದೆ ಅವನಿಗೆ ತಿಳಿಸಿದರು.

"ಆ ಭವನ ಕಟ್ಟಿಸಿದವನು ನಾನೇ ಆದರೂ ನನಗೆ ಅಲ್ಲಿ ವಾಸಮಾಡುವ ಅದೃಷ್ಟವಿಲ್ಲ. ನೀನು ತುಂಬಾ ಅದೃಷ್ಟವಂತ. ನನಗೆ ಬಾಡಿಗೆ ಏನೂ ಕೊಡಬೇಡ. ನೀನಿರುವಷ್ಟು ದಿನ ಸುಖವಾಗಿರು" ಎಂದು ತುಂಬಿದ ಹೃದಯದಿಂದ ಹೇಳಿದರು ಶಾನುಭಾಗರು, ಮತ್ತು ಅಂದೇ ಆ ಭವನಕ್ಕೆ ಒಕ್ಕಲು ಹೋಗುವಂತೆ ಪ್ರಾರ್ಥಿಸಿದರು. ಅವನೊಡನೆ ತುಂಬ ಗೌರವವಾಗಿಯೂ ವರ್ತಿಸಿದರು.

ಶಾನುಭಾಗರ ಕೋರಿಕೆಯಂತೆ ಆ ಬಡವನು ಆ ಗೃಹವನ್ನು ಪ್ರವೇಶಿಸಿ ಸುಖವಾಗಿದ್ದ. ಆ ಆವರಣದಲ್ಲೇ ಅಯ್ಯಪ್ಪನಿಗೆ ಸಣ್ಣದೊಂದು ಗುಡಿಯನ್ನು ಕಟ್ಟಿಸಿ, ಭಕ್ತಿಯಿಂದ ಆರಾಧಿಸಿ, ಪ್ರತಿ ಏಕಾದಶಿಯಂದೂ ಉಪವಾಸವಿದ್ದು, ಸಿರಿಸಂಪದಗಳಿಂದ ಸುಖವಾಗಿ ಕಾಲಕಳೆಯುತ್ತಿದ್ದ. ಕ್ರಮೇಣ ಅದೊಂದು ಪುಣ್ಯಪ್ರದೇಶವಾಗಿ ಕಂಗೊಳಿಸಿತು.





# ಭಿಕ್ಷಾಪಾತ್ರ

ಅನೇಕ ವರ್ಷಗಳ ಹಿಂದೆ ಸಂಗಮ ಪುರ
ವೆಂಬುದೊಂದು ಊರಿನಲ್ಲಿ ಒಬ್ಬ ಬ್ರಾಹ್ಮಣ
ನಿದ್ದನು. ಶಿವಭಟ್ಟ ನೆಂದು ಅವನ ಹೆಸರು.
ಭಿಕ್ಷೆಬೇಡುವುದೇ ಅವನ ವೃತ್ತಿ. ಭಿಕ್ಷೆಯಿಂದ
ಸಿಕ್ಕಿದ ಧಾನ್ಯದಿಂದಲೇ ತೃಪ್ತನಾಗಿ ಹೆಂಡತಿ
ಮಕ್ಕಳನ್ನು ಪೋಷಿಸಿಕೊಂಡಿದ್ದ.

ಅವನ ಗುಡಿಸಲಿನಲ್ಲಿರುವುದೆಲ್ಲ ಮಣ್ಣಿನ
ಮಡಕೆಗಳಾದರೂ ಒಂದೇ ಒಂದು ಬೆಳ್ಳಿ
ತಂಬಿಗೆ ಯಿತ್ತು. ಅದು ಅವನ ತಂದೆ ಭಿಕ್ಷೆ
ಯೆತ್ತಿದ ತಂಬಿಗೆ. ತಂದೆಯಿಂದ ತನಗೆಬಂದ
ಆ ಹಳೆಯಕಾಲದ ತಂಬಿಗೆಯೇ ತನ್ನ ಜೀವ
ವೆಂದು ನಂಬಿದ್ದ ಶಿವಭಟ್ಟ.

ಶಿವಭಟ್ಟನ ಗುಡಿಸಲಿನ ಪಕ್ಕದಲ್ಲಿ ಮಾಣಿ
ಕಾಂಗ ನೆಂಬ ಶ್ರೀಮಂತ ವರ್ತಕನಿದ್ದ.
ದೊಡ್ಡ ಮನೆಯಲ್ಲಿ ವಾಸವಾಗಿದ್ದ. ಅವನಿಗೆ
ಶಿವಭಟ್ಟನ ಬೆಳ್ಳಿ ತಂಬಿಗೆಯಮೇಲೆಯೇ
ಕಣ್ಣು. ಬಿಕ್ಷುಕ ಬ್ರಾಹ್ಮಣನಿಗೆ ಬೆಳ್ಳಿ ತಂಬಿಗೆ
ಏಕೆ? ಭಿಕ್ಷೆ ಎತ್ತಲು ತಗರದ ಡಬ್ಬಾ ಸಾಲದೆ?
ಎಂದುಕೊಂಡ. ಒಂದು ದಿನ ರಾತ್ರಿ ಸಮಯ
ನೋಡಿ ಶಿವಭಟ್ಟನ ಗುಡಿಸಲಿನಿಂದ ಆಬೆಳ್ಳಿಯ
ತಂಬಿಗೆಯನ್ನು ಕದ್ದುಕೊಂಡು ಹೋಗಿಬಿಟ್ಟ
ಮಾಣಿಕಾಂಗ.

ಮರುದಿನ ಬೆಳಗ್ಗೆ ಶಿವಭಟ್ಟ ತನ್ನ ಭಿಕ್ಷಾ
ಪಾತ್ರವನ್ನು ಕಾಣದೆ ಬಹಳ ಚಡಪಡಿಸಿದ.
ನೆರೆಮನೆಯಲ್ಲಿರುವ ಮಾಣಿಕಾಂಗನ ಬಳಿಗೆ
ಹೋಗಿ ತನ್ನ ತಂಬಿಗೆ ಕಳವಾಗಿ ಹೋಯಿ
ತೆಂದು ಹೇಳಿಕೊಂಡು ಮರುಗಿದ. "ಅದು
ನನಗೆ ಮರಳಿ ದೊರೆಯುವ ದಾರಿಹೇಗೆ;
ದೊಡ್ಡವರು ನೀವೇ ಹೇಳಬೇಕು" ಎಂದು
ಕೇಳಿಕೊಂಡ. "ಅದಕ್ಕೇನು ಮಹಾ! ನನಗಿಂತ
ದೊಡ್ಡವ ಶಿವ. ಶಿವನನ್ನು ಕುರಿತು ತಪಸ್ಸು
ಮಾಡು. ಮಹಾ ಬಿಕ್ಷುಕನಾದ ಶಿವನೇ ನಿನಗೆ
ತಕ್ಕದಾರಿ ತೋರಿಸುತ್ತಾನೆ" ಎಂದ ಮಾಣಿ
ಕಾಂಗ ಬಹಳ ಅಲಕ್ಷ್ಯವಾಗಿ.

ಅಮಾಯಕನಾದ ಶಿವಭಟ್ಟನು, ಅವನ
ಮಾತನ್ನು ನಂಬಿ ತಪಸ್ಸಿಗೆ ಹೋದ. ಗುಡ್ಡದ



ಮೇಲೆ ಏಕಾಂತವಾಗಿ ಕುಳಿತು ತಪಸ್ಸು ಮಾಡಿ ಶಿವನನ್ನು ಒಲಿಸಿದ. ಶಿವ ಪ್ರತ್ಯಕ್ಷ ನಾದಾಗ "ಸ್ವಾಮಿ, ನನಗೊಂದು ಭಿಕ್ಷಾ ಪಾತ್ರೆ ಕರುಣಿಸಿ" ಎಂದು ಬೇಡಿಕೊಂಡ. ಕೂಡಲೇ ಶಿವನು ಆತನಿಗೆ ಒಂದು ತಂಬಿಗೆ ಯನ್ನು ಕೊಟ್ಟು ಮಾಯವಾದನು.

ಆತನು ತನ್ನ ಕೈಯಲ್ಲಿ ಇನ್ನೊಂದು ಬಂಗಾರದಂತೆ ಥಳಥಳಿಸುವ ತಂಬಿಗೆ ಹಿಡಿದುಕೊಂಡು ಭಿಕ್ಷೆಯೆತ್ತುವುದನ್ನು ಮಾಣಿ ಕಾಂಗ ನೋಡಿದ. "ಏನಪ್ಪಾ ಇದೆಲ್ಲಿ ಯದು?" ಎಂದು ಕೇಳಿದ. "ನೀವು ಹೇಳಿ ದಂತೆಯೇ ತಪಸ್ಸು ಮಾಡಿದೆ. ಪರಶಿವನು ಈ ತಂಬಿಗೆ ನನಗೆ ಕೊಟ್ಟ" ಎಂದ ಶಿವಭಟ್ಟ. ಅವನ ಮಾತನ್ನು ಮಾಣಿಕಾಂಗನಿಗೆ ನಂಬ ಲಾಗಲಿಲ್ಲ. ಆದರೆ ಆ ತಂಬಿಗೆ ಭೂಲೋಕದ ತಂಬಿಗೆಯಂತೆ! ಕಾಣಲಿಲ್ಲ. ಆದುದರಿಂದ ನಂಬಲೇ ಬೇಕಾಯಿತು.

"ಇದ್ದರೂ ಇದ್ದೀತು. ಶಿವಭಟ್ಟ ಅಮಾ ಯಕ. ಸುಳ್ಳಾಡಲಾರ. ಶಿವ ಕೊಟ್ಟ ತಂಬಿಗೆ ಯಾದರೆ ಅದು ಅಕ್ಷಯ ಪಾತ್ರೆಯೇ ಸರಿ. ಹೇಗಾದರೂ ಅದನ್ನು ಲಪಟಾಯಿಸಲೇ ಬೇಕು" ಎಂದು ತೋರಿತು ಮಾಣಿಕಾಂಗನಿಗೆ.

ಶಿವಭಟ್ಟನು ಎಂದಿನಂತೆಯೇ ಆ ಹೊಸ ತಂಬಿಗೆಯೊಂದಿಗೆ ಭಿಕ್ಷೆಯೆತ್ತುತ್ತಿದ್ದ. ಎಂದಿ ನಂತೆಯೇ ಅಲ್ಪ ತೃಪ್ತಿಯಿಂದ ಸಂತೋಷ ವಾಗಿ ದಿನ ಕಳೆಯುತ್ತಿದ್ದ.

ಆ ತಂಬಿಗೆಯ ಮೇಲೆಯೂ ಕಣ್ಣಿಟ್ಟಿದ್ದ ಮಾಣಿಕಾಂಗನು ಒಂದುದಿನ ರಾತ್ರಿ ಆ ತಂಬಿಗೆ ಯನ್ನೂ ಕದ್ದುಕೊಂಡುಬಿಟ್ಟ. ತಂಬಿಗೆ ಕೈಗೆ ಬಂದ ಕೂಡಲೇ ಅದರ ಮೈಮೆಯಿಂದ ಅವನ ಬುದ್ಧಿ ಮಾರ್ಪಾಟಾಯಿತು. ಐಶ್ವರ್ಯ ಭಾಗ್ಯ ಗಳಮೇಲೆ ಜಿಗುಪ್ಸೆ ಹುಟ್ಟಿತು. ತನ್ನ ಬೆಲೆ ಬಾಳುವ ಉಡುಗೆ ತೊಡುಗೆಗಳನ್ನು ಕಿತ್ತು ಹಾಕಿ ಮನೆಮನೆ ಭಿಕ್ಷೆ ಬೇಡುತ್ತಾ ಹೋದನು.

ಶ್ರೀಮಂತನಾದ ಮಾಣಿಕಾಂಗನು ಬಡವ ನಂತೆ ಭಿಕ್ಷೆ ಬೇಡುವುದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಕೆಲವರು ಬುದ್ಧಿ ಕೆಟ್ಟಿ ತೇನೋ ಎಂದುಕೊಂಡರು. ಕೆಲವರು ಗುರುತು ತಿಳಿಯದೆ ಭಿಕ್ಷೆ ಹಾಕಿದರು. ಹೀಗೆ ಆ ತಂಬಿಗೆಯಲ್ಲಿ ಭಿಕ್ಷೆಯ ಕಾಳನ್ನು ತುಂಬಿಸಿ ಕೊಂಡು ತನ್ನ ಮನೆಗೆ ಹಿಂದಿರುಗಿದ.

ಭಿಕ್ಷುಕನಾದ ತನಗೆ ಇಷ್ಟು ದೊಡ್ಡ ಮನೆಯೇಕೆ? ಮಾರೇಕೆ? ಎಂಬ ವೈರಾಗ್ಯ ಹುಟ್ಟಿತ್ತು ಅವನಿಗೆ. ಆ ತಂಬಿಗೆಯ ಮಹಿಮೆ! ಆತ ಕೂಡಲೇ ತನ್ನ ಮನೆಗೆ ತಾನೇ ಬೆಂಕಿ ಹಚ್ಚಿ ಬಿಟ್ಟ. ಮನೆಯುರಿಯ ತೊಡಗಿತು.

ಮನೆಯಲ್ಲಿದ್ದ ಅವನ ಹೆಂಡತಿ ಮಕ್ಕಳೆಲ್ಲಾ ಹೆದರಿ ಕೂಗಾಡಿದರು. ಈತನಿಗೆ ಹುಚ್ಚು ಹಿಡಿಯಿತೆಂದುಕೊಂಡರು. ಎಲ್ಲರೂ ಬೆಂಕಿಯನ್ನು ಆರಿಸುವ ಪ್ರಯತ್ನದಲ್ಲಿದ್ದರು.

ಆಗ, ಶಿವಭಟ್ಟ ತನ್ನ ತಂಬಿಗೆಯನ್ನು ಹುಡುಕುತ್ತಾ ಅಲ್ಲಿಗೆ ಬಂದ. ಮನೆ ಉರಿಯುವುದನ್ನು ನೋಡಿ ಅವನೂ ಬೆಂಕಿಯನ್ನು ಆರಿಸುವುದಕ್ಕೆ ಮುಂದೆ ಹೋದ.

ತನ್ನ ತಂಬಿಗೆಯನ್ನು ಹಿಡಿದುಕೊಂಡು, ಮನೆ ಉರಿಯುವುದನ್ನು ನೋಡುತ್ತಿರುವ ಮಾಣಿಕಾಂಗನನ್ನು ಕಂಡು ಶಿವಭಟ್ಟನಿಗೆ ಆಶ್ಚರ್ಯವಾಯಿತು. ಮಾಣಿಕಾಂಗ ಉರಿಯುವ ಬೆಂಕಿಯನ್ನು ನೋಡುತ್ತಾ "ಹೋಗಲಿ ಎಲ್ಲಾ! ಏನೂ ಬೇಡ. ಭವತಿ ಭಿಕ್ಷಾಂದೇಹಿ. ಶಿವಶಿವಾ! ಶಿವಶಿವಾ!' ಎಂದು ಕೂಗುತ್ತಿದ್ದ. ಎಲ್ಲರೂ ಬೆಂಕಿಯನ್ನು ಆರಿಸುವ ಗದ್ದಲದಲ್ಲಿದ್ದುದರಿಂದ ಅವನನ್ನು ಗಮನಿಸಲಿಲ್ಲ.

ಶಿವಭಟ್ಟ—"ಇದು ನನ್ನ ತಂಬಿಗೆ. ಇಲ್ಲಿ ಹೇಗೆ ಬಂತು?" ಎಂದು ಕೇಳುತ್ತಲೇ ಮಾಣಿಕಾಂಗ ತಂಬಿಗೆಯನ್ನು ಅವನಿಗೆ ಕೊಟ್ಟುಬಿಟ್ಟ.

ಶಿವಭಟ್ಟನ ತಂಬಿಗೆ ಶಿವಭಟ್ಟನಿಗೆ ಸಿಕ್ಕುತ್ತಲೇ ಮಾಣಿಕಾಂಗನ ಬುದ್ಧಿ ಮೊದಲಿನಂತಾಯಿತು. ಕೂಡಲೇ ಅವನು ಗಾಬರಿಯಿಂದಲೂ ದುಃಖದಿಂದಲೂ "ಅಯ್ಯೋ! ನನ್ನ ಮನೆ! ಮನೆ!' ಎಂದು ಕೂಗಾಡಲಾರಂಭಿಸಿದನು. ಜನರೆಲ್ಲಾ ಆತನಿಗೆ ಹುಚ್ಚು ಹಿಡಿದಿದೆಯೆಂದು ತಿಳಿದರು. ಆತನು ಇನ್ನೂ ಏನೇನು ಅನಾಹುತ ಮಾಡುವನೋ ಎಂದು ಅಂಜಿ ಅವನ ಕೈಗೆ ಕೋಳಹಾಕಿ ಕೋಣೆಯೊಳಗೆ ಕೆಡವಿದರು. ಅಲ್ಲಿ ಅವನು ತಾನು ಮಾಡಿದುದನ್ನು ನೆನೆಯುತ್ತಾ ಸೊರಗಿಹೋದ. ಶಿವಭಟ್ಟ ಎಂದಿನಂತೆ ಶಿವ ಕೊಟ್ಟ ತಂಬಿಗೆಯಿಂದ ಭಿಕ್ಷೆಬೇಡುತ್ತಾ ಸುಖವಾಗಿದ್ದ.



## ನಗೆ ಹನಿ

ದಳ್ಳಾಳಿ:- ಈ ಎತ್ತು ಬಹಳ ಚೆನ್ನಾಗಿದೆ. ಒಂದೇ ಓಟಕ್ಕೆ ಹತ್ತು ಮೈಲಿ ಓಡಬಲ್ಲುದು.

ರೈತ:- ಹಾಗಾದರೆ ನನಗೆ ಬೇಡ. ನಮ್ಮೂರು ಇಲ್ಲಿಗೆ ಆರೇ ಮೈಲಿ.

* * *

ಜಿಪುಣ:- ಭಿಕ್ಷುಕರಿಗೆ ಅನ್ನದಾನ ಮಾಡ ಬೇಕಾದರೆ ಚಂದಾಗೆ ನಮ್ಮನ್ನು ಗೋಳು ಹುಯ್ಯಬೇಕೇ? ಹೋಗಿ ಚಂದಾ ಇಲ್ಲ.

ವಸೂಲಿಗೆ ಬಂದವ:- ಹಾಗಲ್ಲ ಸ್ವಾಮಿ! ನಿಮ್ಮನ್ನು ಚಂದಾ ಕೇಳಲು ಬರಲಿಲ್ಲಾ. ಭೋಜನಕ್ಕೆ ಹೇಳಲು ಬಂದೆ.

—ಡಿ. ಪಿ. ಶ್ರೀನಿವಾಸ

* * *

ಅಪ್ಪ:- ಲೋ! ಕಿಟ್ಟು ಭೀಮೂಗೆ ನಿದ್ದೆ ಬಂತೇನು ನೋಡೋ.

ಕಿಟ್ಟ:- ಹೂಂಕಣಪ್ಪ ಬಂದಿದೆ.

ಅಪ್ಪ:- ಅದು ನಿನಗೆ ಹೇಗೆ ಗೊತ್ತಾಯ್ತೋ?

ಕಿಟ್ಟ:- ನನಗೊತ್ತಪ್ಪ ಅವನೇ ಹೇಳಿದಾನೆ 'ನನಗೆ ನಿದ್ದೆ ಬಂದಿದೆ' ಅಂತ.

* * *

ರಾಮರಾಯರು:- (ತಮ್ಮ ಸ್ನೇಹಿತರಾದ ಶೇಷಣ್ಣನವರನ್ನು ಉಪಚರಿಸುತ್ತಾ) ಶೇಷಣ್ಣನವರೆ ಮಣೆಮೇಲೆ ಕೂಡಿ. ಸಂಕೋಚ ಮಾಡಿಕೋಬೇಡಿ. ಹಾಗೆಲ್ಲಾ ಮಾಡಿದರೆ ನೀವು ಉಟ್ಟುಕೊಂಡಿರೋ ಪಂಚೆ ನನ್ನದು ಹೊಲಸಾಗುತ್ತೇಂತ.

—ಸಿ. ವೇದವ್ಯಾಸ

## ಚುಟುಕಗಳು

ನಮ್ಮ ಬೆಕ್ಕು ಬಿಳಿ
ಅದಕೆ ತುಂಬ ಚಳಿ
ಕುಳಿತು ಒಲೆಯ ಬಳಿ
ನೋಡುತಿತ್ತು ಪಿಳಿ ಪಿಳಿ!

* * *

ಡಬ್ಬಿಯಲ್ಲಿ ಚಕ್ಕುಲಿ
ಹೊಂಚುತಿತ್ತು ಇಲಿ
ಬೆಕ್ಕು ಹಾರೆ ಭುಸ್ಸೆಂದು,
ಕೂಗೋಡಿತು ಚಿಲಿ ಚಿಲಿ!

* * *

ಆಚೆ ಊರ ಸಂತೆ
ಭಾಳ ದೊಡ್ಡದಂತೆ
ದೊಡ್ಡ ಚೀಲದೊಡನೆ ಹೋಗಿ
ದುಡ್ಡು ಮರೆತು ನಿಂತೆ!

—ಕೆ. ಗಿರಿಜಾ

* * *

ಗೊನೆ ಬಿಟ್ಟಿತೆಮ್ಮ ಬಾಳೆ
ಹೊಡೆದೆವು ನಾವು ಕೈಚಪ್ಪಾಳೆ
ಬೆಳೆದು ಬೆಳೆದು ಬಂದಿತು ಮೇಲೆ
ತಿನ್ನುವೆವು ನಾವು ನಾಳೆ.

—ಚಂದ್ರಶೇಖರ ಚಡಗ

* * *

ರಂಗನು ಕಂಡನು ಕಡ್ಡೀಪೆಟ್ಟಿಗೆ
ಕಡ್ಡಿಯ ಹಚ್ಚಿದನೊಂದೇ ಗೀರಿಗೆ
ತೂರಿದನದನು ಯಾವುದೊ ಮೂಲೆಗೆ
ಕಾರಣನಾದನು ಮೂವರ ಸಾವಿಗೆ.

—ಮೋಹನ ರಾಮರಾವ್

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1955 ಜನವರಿ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ನವಂಬರ್ 7 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.
ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು – 26.

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ಇದು ಧೈರ್ಯ!

ಎರಡನೇ ಫೋಟೋ: ಇದೆಂಥ ಧೈರ್ಯ?

ಕಳಿಸಿದವರು: ಜಿ. ಗಿರಿಜ, ನಂ. ೬. ರಘುನಾಯಕರು ಸ್ಟ್ರೀಟ್,
ಓ. ಟಿ. ಮದರಾಸು.

ಬಹುಮತಿ ರೂ. 10/–ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.



# ವಾರ್ತೆಗಳು-ವಿಶೇಷಗಳು

ಹಾನಗಲ್ಲಿನ ಪ್ರಮುಖ ವ್ಯಾಪಾರಿಗಳಾದ ಶ್ರೀ ಶ್ರೀನಿವಾಸಾಚಾರ್ಯ ಚಿನ್ನಮುಳಗುಂದ ಎಂಬ ಮಹನೀಯರು ಹಾನಗಲ್ಲಿನಲ್ಲಿರುವ ನ್ಯೂ ಇಂಗ್ಲಿಷ್ ಶಾಲೆಗಾಗಿ ಜನತಾ ಶಿಕ್ಷಣ ಸಂಘಕ್ಕೆ ನಾನ್ನೂರು ರೂಪಾಯಿಗಳ ದಾನದೊಂದಿಗೆ, ಆ ಸಂಸ್ಥೆಯ ಸಂಸ್ಥಾಪಕ ಸದಸ್ಯರಾಗಲು ಮುಂದೆ ಬಂದಿದ್ದಾರೆ.

*   *   *

ಇತ್ತೀಚಿಗೆ ದಕ್ಷಿಣಭಾರತದ ಘೋಡುಪೂಜಾ ತಾಲೂಕಿನ ಉದುಂಬನೂರು ಎಂಬಲ್ಲಿಯ ಗುಡ್ಡವೊಂದು ಒಡೆದು ನೀರಿನ ಪ್ರವಾಹವು ಹೊರಟು ಒಬ್ಬ ಮನುಷ್ಯನೂ ಅನೇಕ ದನಕರುಗಳೂ ತೇಲಿಹೋದರು.

*   *   *

ಈ ವರ್ಷದಲ್ಲಿ ಬಂದ ಬಿಹಾರಪ್ರಾಂತದ ನೆರೆಹಾವಳಿ ಬಹಳ ಭಯಂಕರವಾಗಿತ್ತು. ೧೯೩೪ರಲ್ಲಿ ಉಂಟಾದ ದೊಡ್ಡ ಭೂಕಂಪಕ್ಕಿಂತಲೂ ಹೆಚ್ಚಿನ ಭೀಕರ ಪರಿಸ್ಥಿತಿ ಈ ನೆರೆಹಾವಳಿಯಿಂದ ಒದಗಿತು. ಸುಮಾರು ೩೦ ವರ್ಷಗಳಿಗಿಂತ ಒಳ್ಳೆಯ ಬೆಳೆಬಂದಿದ್ದ ಪ್ರದೇಶವೆಲ್ಲಾ ಸಂಪೂರ್ಣ ನಾಶವಾಗಿರುತ್ತದೆ. ಲಕ್ಷಗಟ್ಟಲೆ ಜನರು ನಿರಾಶ್ರಿತರಾಗಿ ಸಂತ್ರಸ್ತ ಪರಿಹಾರಕ ನಿಧಿಗೆ ಭಾಜನರಾದರು ಈ ನೆರೆಹಾವಳಿಯಿಂದ.

ಬಿಹಾರ ನೆರೆಹಾವಳಿ ಪರಿಹಾರಕ್ಕಾಗಿ ಭಾರತ ಪ್ರಧಾನರಾದ ಪಂಡಿತನೆಹರೂ ರಾಷ್ಟ್ರೀಯ ಪರಿಹಾರ ನಿಧಿಯಿಂದ ಐವತ್ತು ಸಾವಿರ ರೂಪಾಯಿ ಕೊಡಿಸಿದ್ದಾರೆ.

*   *   *

ತೀನಿಪಾನಗಳನ್ನು ಒದಗಿಸುವುದರಲ್ಲಿಯೂ, ಅಂತಹ ಸಂಸ್ಥೆಗಳ ವ್ಯವಸ್ಥೆಯ ಕ್ರಮವನ್ನು ನೋಡಿಕೊಳ್ಳುವುದರಲ್ಲಿಯೂ ತಕ್ಕ ಶಿಕ್ಷಣ ನೀಯುವ ಕಾಲೇಜನ್ನು ಬೊಂಬಾಯಿಯ ಅಖಿಲಭಾರತ ಆಹಾರಸಮಿತಿಯವರು ಪ್ರಾರಂಭಿಸಿದ್ದಾರೆ. ಇದು ಏಷ್ಯಾದಲ್ಲಿಯೇ



ಮೊತ್ತಮೊದಲಿನ ಕಾಲೇಜು. ಭಾರತದಲ್ಲೆಲ್ಲಾ ಹರಡಿರುವ 'ಅನ್ನಪೂರ್ಣ' ಉಪಾಹಾರ ಮಂದಿರಗಳಿಗೆ ತಕ್ಕ ಸಿಬ್ಬಂದಿಗಳನ್ನು ಒದವಿಸಲು ಈ ಕಾಲೇಜಿನಲ್ಲಿಒಳ್ಳೆಯ ಶಿಕ್ಷಣ ಕೊಡಲಾಗುವುದು.

*　　　*　　　*

**ಕೋ**ಳಿಗಳ ಸಾಕುವಿಕೆಯಬಗ್ಗೆ ಧಾರವಾಡ ಕೋಳೀಸಾಕುವ ಫಾರ್ಮಿನವರು ಕಳೆದ ಸೆಪ್ಟೆಂಬರದಿಂದ ಮೂರು ತಿಂಗಳು ಶಿಕ್ಷಣ ಕೊಡುತ್ತಾರೆ. ವಿದ್ಯಾರ್ಥಿಗಳಿಗೆ ಶಿಕ್ಷಣ ವಸತಿಗಳನ್ನು ಪುಕ್ಕಟೆ ಒದಗಿಸುವರು. ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ೨೦ ರೂಪಾಯಿ ಸಹಾಯಧನವನ್ನು ಕೂಡಾ ಕೊಡುತ್ತಾರಾಗಿ ತಿಳಿದುಬಂದಿದೆ.

*　　　*　　　*

**ದ**ಕ್ಷಿಣಕನ್ನಡದ ಮೂಲ್ಕಿ ಸರಕಾರಿ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾದ ಶ್ರೀ ಕೆ. ವಿಟ್ಠಲಶೆಣ್ಯೆ ಬಿ. ಎ., ಎಲ್. ಟಿ. ಇವರು, ಅಮೇರಿಕ ಸರಕಾರದ ಅಂತರರಾಷ್ಟ್ರೀಯ ಶೈಕ್ಷಣಿಕ ವಿನಿಮಯ ಕಾರ್ಯಕ್ರಮದಲ್ಲಿ ಭಾಗವಹಿಸುವ ಸಲುವಾಗಿ ಕಳೆದ ಆಗಸ್ಟಿನಲ್ಲಿ ಅಮೆರಿಕಾಕ್ಕೆ ತೆರಳಿರುತ್ತಾರೆ. ಮೂರು ವರ್ಷಗಳಿಂದ ನಡೆಯುತ್ತಿರುವ ಈ ಕಾರ್ಯಕ್ರಮದಲ್ಲಿ ಕನ್ನಡಿಗರು ಭಾಗವಹಿಸುವುದು ಇದುವೇ ಮೊದಲನೆಯದಾಗಿದೆ.

*　　　*　　　*

**೧೯೫೪** ನೇ ವರ್ಷದ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಸಂಸ್ಕೃತ ವಿಷಯದಲ್ಲಿ ನೂರಕ್ಕೆ ೯೨ ಮಾರ್ಕುಗಳನ್ನು ಪಡೆದ ಬೆಳಗಾವಿಯ ಬೇಸನ್ ಸ್ಮಿತ್ ಹಾಯ್‌ಸ್ಕೂಲಿನ ವಿದ್ಯಾರ್ಥಿ ಕೆ. ಬಸವರಾಜಸಂಗಪ್ಪ ಜವಳೆ ಎಂಬವನಿಗೆ ನಾರಾಯಣರಾವ್ ಜೋಷಿ ಸಂಸ್ಕೃತ ಬಹುಮಾನವಾದ ರೂಪಾಯಿ ೫೦ ಸಿಕ್ಕಿರುತ್ತದೆ.

*　　　*　　　*

**ಮ**ದರಾಸಿನ ಮಾಜಿ ಪ್ರಧಾನಮಂತ್ರಿಗಳಾದ ಶ್ರೀ ಸಿ. ರಾಜಗೋಪಾಲಾಚಾರ್ಯರಿಗೂ, ದೊಡ್ಡ ವೈಜ್ಞಾನಿಕರಾದ ಡಾಕ್ಟರ್ ಸಿ. ವಿ. ರಾಮನ್ನರಿಗೂ, ಉಪರಾಷ್ಟ್ರಾಧ್ಯಕ್ಷರಾದ ಶ್ರೀ ರಾಧಾಕೃಷ್ಣರಿಗೂ ಭಾರತ ರಾಷ್ಟ್ರಾಧ್ಯಕ್ಷರು "ಭಾರತರತ್ನ" ಎಂಬ ಗೌರವವನ್ನು ಕರುಣಿಸಿರುತ್ತಾರೆ.

*　　　*　　　*

**ಈ**ಗ ಅನೇಕ ತಂತೀಕಛೇರಿಗಳಲ್ಲಿ ಹಿಂದೀ ಭಾಷೆಯಲ್ಲಿ ತಂತಿ ಕಳುಹಿಸುವ ವ್ಯವಸ್ಥೆ ಮಾಡಿರುತ್ತಾರೆ. ಇದಲ್ಲದೆ ಹಿಂದಿಯಲ್ಲಿ ತಂತೀಮೂಲಕ ಹಣ ಕಳುಹಿಸುವ ವ್ಯವಸ್ಥೆ ಕೂಡ ಒದಗಿಸಿರುತ್ತಾರೆ.



# ಚಿತ್ರ ಕಥೆ



ವಾಸುವೂ ಗೋಪಿಯೂ ಗಣೇಶಚೌತಿಯದಿನ ಒಂದು ತಮಾಷೆ ಮಾಡಿದರು. 'ಪ್ರೊಫೆಸರ್ಸ್ ವಾಸೂ ಗೋಪಿಯರ ಮ್ಯಾಜಿಕ್' ಎಂದು ಕಾಗದದಲ್ಲಿ ಬರೆದು ಎಲ್ಲರಿಗೂ ಹಂಚಿದರು. ಒಂದು ಹಳೆಯ ಟೊಪ್ಪಿಯೊಳಗೆ ಬಿಸ್ಕೆಟ್ ಇಟ್ಟು, ಮೇಲೆ ಒಂದು ರಟ್ಟನ್ನಿಟ್ಟು ಮ್ಯಾಜಿಕ್‌ಮಾಡಲು ತಯಾರಾದರು.




ಹೀಗಿಟ್ಟ ಟೋಪಿಯೊಳಗೆ ಬಿಸ್ಕೆಟ್ಟಿಗಾಗಿ ಒಂದು ಇಲಿ ಬಂದು ಅಡಗಿರುವ ಸಂಗತಿ ಅವರಿಗೆ ತಿಳಿಯದು. "ಇಗೋ ನೋಡಿ. ಈ ಖಾಲೀ ಟೋಪಿಯಿಂದ ಬಿಸ್ಕೆಟ್ ಬರುತ್ತೆ" ಎಂದು ಟೋಪಿಯನ್ನು ಕದಲಿಸಿದಾಗ, ಅದರೊಳಗಿದ್ದ ಇಲಿ ಹೊರಗೆ ಹಾರಿತು. ವಾಸೂ ಗೋಪಿಯರು ಕಕಬಿಕಿಯಾದರು!

Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26. Controlling Editor: SRI 'CHAKRAPANI'





"ಚಂದಮಾಮ" ಇದನ್ನು ಕುರಿತು ಪ್ರತ್ಯೇಕವಾಗಿ ಹೇಳಿಕೊಳ್ಳಬೇಕಾಗಿಲ್ಲ. ಬಲು ರಮಣೀಯವಾದ ಆಕೃತಿಯಿಂದ, ಮುದುಕರಿಂದ ಮಕ್ಕಳವರೆಗೆ ಎಲ್ಲರೂ ಅತ್ಯಾಸಕ್ತಿಯಿಂದ ಓದುವಂತಹ ರಚನೆಗಳಿಂದ ಕೂಡಿದ ಈ "ಕುಟುಂಬ ಪತ್ರಿಕೆ"ಗೆ ಒಂದು ವಿಶಿಷ್ಟತೆಯುಂಟು.

ಮಕ್ಕಳಿಗೆ ಕಥೆಗಳೆಂದರೆ ಪ್ರಾಣ. ಕಥೇ ಕಥೇ ಎಂದು ಹಿರಿಯರನ್ನು ಕಿರಿಕಿರಿ ಮಾಡುತ್ತಾರೆ. ಧೈರ್ಯಸಾಹಸಗಳನ್ನು ರೂಪಿಸುವ ಹಳೆಯ ಕಥೆಗಳೆಂದರೆ ಅವರಿಗೆ ರುಚಿ. ಅಂತಹ ಸಾಹಿತ್ಯವನ್ನು ಒಪ್ಪಿಸಿ ಓದುವವರಿಗೆ ಲಾಭದಾಯಕವಾದ ಪತ್ರಿಕೆಯನ್ನು ನಡೆಸಬೇಕೆಂಬ ಯೋಚನೆ, ಸುಮಾರು ಇಪ್ಪತ್ತು ವರ್ಷಗಳ ಕೆಳಗೆ' ಆಂಧ್ರದೇಶದ ತೆನಾಲಿ ನಿವಾಸಿಗಳಾದ ಶ್ರೀ ಚಕ್ರಪಾಣಿಯವರಿಗೆ ಉಂಟಾಯಿತು.



ಶ್ರೀ ಚಕ್ರಪಾಣಿ

ಅನಾದಿಯಾಗಿ ಎಷ್ಟೋ ಕಥೆಗಳು ಪ್ರಚಾರದಲ್ಲಿವೆ. ಅವುಗಳಲ್ಲಿ ಒಳ್ಳೆಯ ನೀತಿ ಇವೆ; ಪ್ರಾಚೀನ ಸಂಸ್ಕೃತಿ ಸಾಂಪ್ರದಾಯಗಳಿವೆ; ಅವುಗಳ ಮೂಲಕ ಮಕ್ಕಳು ತಮ್ಮ ಸಂಸ್ಕೃತಿಗೆ ತಳಪಾಯ ಹಾಕಿಕೊಳ್ಳಬಹುದು. ಇಂತಹ ಕಥೆಗಳು ದೇಶದೊಳಗೆಲ್ಲಾ ಅಸಂಖ್ಯವಾಗಿವೆ. ಅವುಗಳನ್ನು ಒಪ್ಪಾಗಿಸಿ ಜನತೆಗೆ ಕೊಡಬೇಕೆಂಬುದು ಶ್ರೀ ಚಕ್ರಪಾಣಿಯವರ ಸಂಕಲ್ಪ.

ಆದರೆ ಈ ಸಂಕಲ್ಪವನ್ನು ಅವರು ಒಡನೆಯೇ ಆಚರಣೆಗೆ ತರುವಂತಿಲ್ಲ; ಏಕೆಂದರೆ, ಒಂದು ಉದ್ಯಮವಾಗಬಲ್ಲ ಈ ಕೆಲಸವನ್ನು ಉದಾತ್ತರೀತಿಯಲ್ಲಿ ಸಾಗಿಸಬೇಕೇಹೊರತು, ಅವಸರ







ದಿಂದ ಹೇಗಾದರೂ ತೊಡಗಿ ಬಿಟ್ಟರೆ, ಮೂಲ ಉದ್ಯಮಕ್ಕೇ ಮುಪ್ಪು ತಟ್ಟೀತು; ಅಗ್ಗದ ಅನುಕರಣೆಗಳು ಹೊರಟಾವು. ಧ್ಯೇಯವು ಎಷ್ಟು ಉದಾತ್ತವಾದುದೋ ಅದರ ಆಚರಣೆ ಕೂಡಾ ಅಷ್ಟು ಉದಾತ್ತವಾಗಿರಬೇಕು. ಆ ಧ್ಯೇಯವನ್ನು ಪೂರ್ಣ ಅರ್ಥ ಮಾಡಿಕೊಂಡು, ತಕ್ಕ ಕ್ರಮದಿಂದ ನಡೆಯಿಸಬಲ್ಲ ಶಕ್ತಿಸಾಮರ್ಥ್ಯವುಳ್ಳವರ ಸಹಕಾರ ಕೂಡಾ ಇರಬೇಕು.

ಆದುದರಿಂದ ಒಂದು ದಶಾಬ್ದದವರೆಗೂ ಈ ಉದ್ಯಮವು ಬರಿಯ ಧ್ಯೇಯರೂಪದಲ್ಲೇ ಉಳಿದು ಹೋಯಿತು. ಅನಂತರ ತಮ್ಮ ಧ್ಯೇಯವನ್ನು ಸಾಧನೆಗೆ ತರಬಲ್ಲ ವ್ಯಕ್ತಿ ಶ್ರೀ ಬಿ. ನಾಗಿರೆಡ್ಡಿಯವರು ಶ್ರೀ ಚಕ್ರಪಾಣಿಯವರಿಗೆ ದೊರೆತರು. ಶ್ರೀ ನಾಗಿರೆಡ್ಡಿ ಮುದ್ದಾದ ಮುದ್ರಣಕ್ಕೆ ಸಿದ್ಧಹಸ್ತರು. ಮದರಾಸಿನಲ್ಲಿರುವ ಅವರ ಬಿ. ಎನ್. ಕೆ. ಪ್ರೆಸ್ಸಿನ ಕೀರ್ತಿ ಎಲ್ಲೆಡೆಗೂ ವ್ಯಾಪಿಸಿತ್ತು. ತಮ್ಮ ಕೃತಿಗಳನ್ನು ಬಿ. ಎನ್. ಕೆ. ಪ್ರೆಸ್ಸಿನಲ್ಲಿ ಮುದ್ರಿಸಿಕೊಳ್ಳಲು ಬಂದ ಶ್ರೀ ಚಕ್ರಪಾಣಿ, ತಮ್ಮ ಧ್ಯೇಯವನ್ನು ಶ್ರೀ ನಾಗಿರೆಡ್ಡಿಯವರಿಗೆ ತಿಳಿಸಿದರು. ಒಡನೆಯೆ ಶ್ರೀ ನಾಗಿರೆಡ್ಡಿ ಆ ಧ್ಯೇಯಕ್ಕೆ ರೂಪಕಲ್ಪನೆ ಮಾಡುವ ನಿಮಿತ್ತವಾಗಿ ಬಿ. ಎನ್. ಕೆ. ಪ್ರೆಸ್ಸನ್ನು ಆಯತ್ತಗೊಳಿಸಿದರು. 'ಚಂದಮಾಮ' ತೆಲುಗು ತಮಿಳು ಭಾಷೆಗಳಲ್ಲಿ ಪ್ರಕಟಮಾಡಲು ಒಂದು ನಿರ್ದಿಷ್ಟವಾದ ದೀರ್ಘಕಾಲ ಯೋಜನೆ ತಯಾರಾಯಿತು. ಈ ಯೋಜನೆ ಕ್ರಮೇಣ ಭಾರತೀಯ ಪತ್ರಿಕಾ ಪ್ರಕಾಶನ ಚರಿತ್ರೆಯಲ್ಲಿ ಅಪೂರ್ವವೆನಿಸುವಂತೆ ಪರಿಣಮಿಸಿತು.



ಶ್ರೀ ನಾಗಿರೆಡ್ಡಿ

"ಚಂದಮಾಮ" ಪ್ರಾರಂಭದಿಂದಲೇ ಒಳ್ಳೆಯ ಗೆಲುವಿನಿಂದಸಾಗಿತು. ಎರಡನೆಯ ಸಂಚಿಕೆಯಲ್ಲೇ 20 ಸಾವಿರ ಪ್ರತಿಗಳನ್ನು ಎತ್ತಬೇಕಾಗಿಬಂತು. ಇತರ ಭಾಷೆಗಳವರು ಈ ಪತ್ರಿಕೆ







ಯನ್ನು ತಮ್ಮ ಭಾಷೆಯಲ್ಲಿ ಕೂಡಾ ಹೊರಡಿಸಬೇಕೆಂದು ಪ್ರೋತ್ಸಾಹಿಸ ತೊಡಗಿದರು. ಶ್ರೀ ನಾಗಿರೆಡ್ಡಿ ಪತ್ರಿಕೆಯ ವಿಜಯದ ಮರೆಯಲ್ಲಿರುವ ಅನೇಕ ಬಾಲಾರಿಷ್ಟಗಳನ್ನು ತೊಲಗಿಸುತ್ತ, "ಚಂದಮಾಮ"ವನ್ನು ಕನ್ನಡ, ಹಿಂದಿ, ಮರಾಠಿ, ಮಲೆಯಾಳ, ಗುಜರಾಥಿ ಭಾಷೆಗಳಲ್ಲಿಕೂಡಾ ಹೊರಡಿಸಿದರು ; ಸರಕಾರವು ಗುರುತಿಸಿರುವ ಹನ್ನೊಂದು ಭಾಷೆಗಳಲ್ಲಿ ಏಳು ಭಾಷೆಗಳ "ಚಂದಮಾಮ" ಬೆಳಗುವಂತೆ ಮಾಡಿದರು. ತಮ್ಮ ಭಾಷೆಗಳಲ್ಲಿ ಕೂಡಾ "ಚಂದಮಾಮ"ವನ್ನು ಬೆಳಗಿಸಬೇಕೆಂದು ಸಿಂಧೀ, ಬೆಂಗಾಳೀ ಸಂಘಗಳಿಂದ ಪತ್ರಗಳ ಮಾಲೆಯೇ ಬರುತ್ತಿವೆ.

ಈ ವಿಜಯಕ್ಕೆ ನಾಗಿರೆಡ್ಡಿ ಚಕ್ರಪಾಣಿಯವರ ಪತ್ರಿಕಾ ನಿರ್ವಹಣೆಯ ನಿಷ್ಠೆ ಶ್ರದ್ಧೆಗಳೂ, ಅವರಿಗೆ ಸಹಕರಿಸುವ ನಿರ್ವಾಹಕವೃಂದದ ಶ್ರದ್ಧಾ ಸಕ್ತಿಗಳೂ ಕಾರಣವಾಗಿವೆ. ಹಿಂದಿ"ಚಂದಮಾಮ" ಸಹಜವಾಗಿಯೇ ಅಗ್ರಸ್ಥಾನದಲ್ಲಿದೆ. ಅದು ತಿಂಗ—ತಿಂಗಳೂ, 50 ಸಾವಿರ ಪ್ರತಿಗಳನ್ನು ಮಿಂಚಿ ಹೋಗುತ್ತಾ ಇದೆ. ಅನಂತರ ಹೇಳಿಕೊಳ್ಳುವಂತಹದು ತೆಲುಗು, ಮರಾಠೀ ಪ್ರಕಾಶನಗಳು. ಇವು ಒಂದೊಂದೂ 40 ಸಾವಿರ ಪ್ರತಿಗಳಿಗೆ ಮಿಕ್ಕಿಯೇ ಹೋಗುತ್ತವೆ.

ಆದರ್ಶತೆಗಾಗಿ ಕೆಲಸಮಾಡುವುದು ಬಹು ಖರ್ಚಿನಿಂದ ಕೂಡಿದ ಕೆಲಸವೆಂದು ಎಲ್ಲರೂ ಬಲ್ಲರು. ಅದರಲ್ಲಿಯೂ "ಚಂದಮಾಮ" ನಿರ್ದುಷ್ಟತೆಯನ್ನು ಬಯಸುವ ಪತ್ರಿಕೆ. ಅಂತಹ ಸಂದರ್ಭದಲ್ಲಿ ಪತ್ರಿಕೆಯ ಮೇಲೆ ಬರುವ ನಷ್ಟವನ್ನು, ಸಾಧ್ಯವಾದಷ್ಟು ಕಡಮೆಗೊಳಿಸಿ,ಆರ್ಥಿಕ ದೃಷ್ಟಿಯಿಂದ ಪತ್ರಿಕೆಯ ಅಭಿವೃದ್ಧಿಗೆ ತೊಡಕು ಬಾರದಂತೆ ನೋಡಿಕೊಳ್ಳಲಿಕ್ಕೆ, ಶ್ರೀ ನಾಗಿರೆಡ್ಡಿಯವರ ವ್ಯಾಪಾರದಕ್ಷತೆಯೇ ಮುಖ್ಯ ಸಹಾಯಕವಾಗಿದೆ.



ಶ್ರೀ ಪ್ರಸಾದ್

"ಚಂದಮಾಮ" ಮೊದಲಿದ್ದ ಇಕ್ಕಟ್ಟಾದ ಸ್ಥಳದಿಂದ ಹೊರಬಿದ್ದು, ರಮಣೀಯವಾದ ಸ್ವಂತ ಭವನಗಳಲ್ಲಿ ಬಂದು ಸೇರಿದೆ. ಇದರ ನಿರ್ವಾ







ಹಕರಾದ ನಾಗಿರೆಡ್ಡಿ, ಚಕ್ರಪಾಣಿಯವರುಕೂಡಾ ಇದೇ ಆವರಣದಲ್ಲಿ ಸೇರಿದ್ದಾರೆ. ಪ್ರೆಸ್ ಕಮಿಷನ್ ಸದಸ್ಯರಲ್ಲೊಬ್ಬರು ತಮ್ಮ ಮಿತ್ರರೊಂದಿಗೆ ಹೇಳಿದಂತೆ ಈ ಪತ್ರಿಕೆ "ಪತ್ರಿಕೋದ್ಯಮಕ್ಕೊಂದು ಅಲಂಕಾರ," ಧ್ಯೇಯಪೂರಿತವಾದುದು, ಆಹ್ಲಾದಜನಕವಾದುದು.....

"ಕೋಟಿ ಬೆಲೆಬಾಳುವ ಪತ್ರಿಕೆ"

ರೆಡ್ಡಿ ಚಕ್ರಪಾಣಿದ್ವಯರು ಇದೇವಿಧವಾಗಿ ಚಿತ್ರೋದ್ಯಮದಲ್ಲಿಕೂಡಾ ತಮ್ಮ ಪ್ರಭಾವವನ್ನು ತೋರಿಸುತ್ತಿದ್ದಾರೆ. ಈ ದಿನಗಳಲ್ಲಿ ವಾಹಿನಿ ಸ್ಟುಡಿಯೋ ಚಿತ್ರನಿರ್ಮಾಪಕರಿಗೆ ·ನಂದನವನದಂತಿರಲಿಕ್ಕು, ಸೂಯೆಜ್‌ನ ಪೂರ್ವದಲ್ಲಿ ಇಷ್ಟು ದೊಡ್ಡ ಸ್ಟುಡಿಯೋ ಇಲ್ಲೆಂಬ ಮಾತಿಗೂ ಕಾರಣವೆಂದರೆ, ಇವರಿಬ್ಬರೂ ತಮ್ಮ ಶಕ್ತಿಗಳನ್ನು ಮೇಳವಿಸಿ ಉತ್ಸಾಹದಿಂದ ಕ್ರಮವಿಧಾನವನ್ನನುಸರಿಸಿ ಕೆಲಸಮಾಡುವುದೇ. ಸಿನಿಮಾರಂಗದಲ್ಲಿ ವಾಹಿನಿ ಸ್ಟುಡಿಯೋವಿನಂತೆಯೇ ಪತ್ರಿಕಾಪ್ರಪಂಚದಲ್ಲಿ "ಚಂದಮಾಮ" ಕೂಡಾ ಅನುಪಮವೆಂದೂ, ಆದರ್ಶಪ್ರಾಯವೆಂದೂ ಆಗಾಗ ಪ್ರಶಂಸಿಸಲ್ಪಡುತ್ತದೆ.



ಶ್ರೀ ತಿರುಪತಿರಾವು

ಇದಕ್ಕಿಂತ ದೊಡ್ಡ ವಿಶೇಷವೇನೆಂದರೆ, ಶ್ರೀ ರೆಡ್ಡಿಯವರ ಕುಮಾರ ಪ್ರಸಾದ್ ಮತ್ತು ಶ್ರೀ ಚಕ್ರಪಾಣಿಯವರ ಕುಮಾರ ತಿರುಪತಿರಾವು ಇವರುಗಳು ತಮ್ಮ ತಂದೆಯವರ ಅಡಿಜಾಡಿನಲ್ಲಿಯೇ ನಡೆಯುತ್ತ, ಅವರು ನೆಲೆಗೊಳಿಸಿದ ಸತ್ಸಂಪ್ರದಾಯಗಳನ್ನು ಮುಂದೊಯ್ದು, ಅಗತ್ಯವಾದಲ್ಲಿ ಅವುಗಳನ್ನು ಅಭಿವೃದ್ಧಿಗೊಳಿಸಲಿಕ್ಕೆ ಸಮರ್ಥರಾಗುವಂತಹ ದಾರಿಯಲ್ಲಿದ್ದಾರೆ. ಭಾವೀನಾಯಕರಾದ ಇವರು ಈ ಸಂಸ್ಥೆಯ ನಿರ್ವಹಣಕಾರ್ಯದಲ್ಲಿ ಶ್ರದ್ಧಾಸಕ್ತಿಯುಳ್ಳವರು. ಮತ್ತು "ಚಂದಮಾಮ"ಕ್ಕೆ ಸಂಬಂಧಿಸಿದ ಕೆಲಸಮಾತ್ರವಲ್ಲದೆ, ಅದಕ್ಕಿಂತ ಅನೇಕ ಮಡಿ ಹೆಚ್ಚು ಪರಿಮಾಣವಿರುವ ಕೆಲಸವೆನಿಸಿದ ಬ್ರಹ್ಮಾಂಡವಾದ ಪ್ರೋಸೆಸ್ ಯೂನಿಟ್‌ನ ದೊಡ್ಡ ಖ್ಯಾತಿಯನ್ನೂ ಗಳಿಸಿದ್ದಾರೆ. ಇದು ಈ ಯುವಕರ ಕಾರ್ಯದಕ್ಷತೆಗೆಪ್ರತ್ಯಕ್ಷನಿದರ್ಶನವಾಗಿದೆ.




"ಚಂದಮಾಮ" ನಿಮಗೆ ಚೆನ್ನಾಗಿ ಗೊತ್ತುತಾನೆ. ಅದು ಎಲ್ಲಾ ಪತ್ರಿಕೆಯ ಅಂಗಡಿಗಳಲ್ಲಿಯೂ ಕಾಣಿಸುತ್ತದೆ. ಯಾರ ಮನೆಗೆ ಹೋದರೂ ಅಲ್ಲಿ ಪ್ರತ್ಯಕ್ಷವಾಗುತ್ತದೆ. ಅಂದವಾದ ಅದರ ಸಂಸ್ಕರಣವೂ, ಆಹ್ಲಾದಕರವಾದ ಒಳಗಿನ ಕೃತಿಗಳೂ ಮನಸ್ಸನ್ನು ಸೆಳೆದುಬಿಡುತ್ತವೆ.



ಆದರೆ ಆದರ ಉತ್ಪತ್ತಿ ಪರಿಣಾಮಗಳು ನಿಮಗೆ ತಿಳಿಯದಿರಬಹುದು. ಆದುದರಿಂದ ಒಳಗೆ ನಡೆತಂದು ಇದರ ಕಥೆ ಕೇಳಿರಿ: ಒಳಕ್ಕೆ ಕಾಲಿಡುವಾಗಲೇ ಮೂರು ಸುತ್ತೂ ಸುಂದರವಾದ ಕಟ್ಟಡಗಳೂ, ಒಂದು ಬದಿಯಲ್ಲಿ ರಮ್ಯವಾದ ಮನೆಗಳೂ ಕಾಣಿಸುತ್ತವೆ.

1. ಈ ಭವನದಲ್ಲಿ ಚಿತ್ರಕಾರರು "ಚಂದಮಾಮ"ಕ್ಕೆ ಅಲಂಕಾರಪ್ರಾಯವಾದ ಚಿತ್ರಗಳನ್ನು ತಯಾರಿಸುತ್ತಾರೆ. "ಚಂದಮಾಮ"ವನ್ನು ವಿವಿಧಭಾಷೆಗಳಲ್ಲಿ ದೇಶದ ನಾಲ್ಕುಮೂಲೆಗಳಿಗೂ ಮುಟ್ಟಿಸುವ ಶಾಖೆಗಳು ಇದರಲ್ಲೇ ಇವೆ.



1



2



3

4





2. ಬಹು ಭಾಷೆಗಳಲ್ಲಿ "ಚಂದಮಾಮ"ವನ್ನು ಸೃಷ್ಟಿಸಿದ ಶ್ರೀ ನಾಗಿರೆಡ್ಡಿ, ಶ್ರೀ ಚಕ್ರಪಾಣಿಯವರು ಈ ಭವನದಲ್ಲಿದ್ದಾರೆ.

3. ಈ ಭವನದಲ್ಲಿ ಸಂಪಾದಕವರ್ಗದ ಕೋಣೆಗಳೂ, ಅಚ್ಚಾಫೀಸೂ ಇವೆ.

4. "ಚಂದಮಾಮ"ನಲ್ಲಿ ಕಾಣಿಸುವ ಅಂದವಾದ ಚಿತ್ರಗಳೆಲ್ಲಾ ನಿರ್ದುಷ್ಟವಾಗಿ ಇಲ್ಲಿಯೇ ಪ್ರೋಸೆಸ್ ಆಗಿ, ಬಗೆಬಗೆಯ ಬಣ್ಣಗಳಲ್ಲಿ "ಚಂದಮಾಮ"ನಲ್ಲಿ ಏರುತ್ತವೆ.



ಪತ್ರಿಕಾಲಯಗಳಲ್ಲಿ ಜರುಗುವ ಕರ್ಮಕಾಂಡವೇ ಇಲ್ಲಿಯೂ ಜರುಗುತಿದ್ದರೂ, ಚಂದಮಾ ಮಾವರಣ ಶುಭ್ರವಾಗಿ ಕನ್ನಡಿಯಂತೆ ಇರುತ್ತದೆ. ಇದಕ್ಕೆ ಸಂಬಂಧಿಸಿದ ಎಲ್ಲಾ ಶಾಖೆಗಳೂ ಯಂತ್ರದಂತೆಯೇ ಕೆಲಸಮಾಡುತ್ತವೆ. ಇದರಲ್ಲಿ ಕೆಲಸ ಮಾಡುವವರೆಲ್ಲರೂ "ಚಂದಮಾಮ" ಆದರ್ಶತೆಯನ್ನು ಶಿರಸಾ ವಹಿಸುತ್ತಾರೆ.



ಇವರೇ "ಚಂದಮಾಮ" ಸಂಪಾದಕ ವರ್ಗ. ಎಲ್ಲರಿಗೂ ಅರ್ಥವಿಸುವ ಸುಲಭಶೈಲಿಯಲ್ಲಿ ಪ್ರಾಚೀನ ಸಂಸ್ಕೃತಿಯನ್ನು ಪ್ರತಿಫಲಿಸುವ ನೀತಿ ಕಥೆಗಳನ್ನು ಇವರು "ಚಂದಮಾಮ" ಓದುಗರಿಗಾಗಿ ತಿದ್ದಿ ತೀಡುತ್ತಾರೆ.



"ಚಂದಮಾಮ"
ಚಿತ್ರಕಾರರು. ಸಂಪಾ
ದಕವರ್ಗವು ಆರಿಸಿ
ಕೊಟ್ಟ ಕಥೆಗಳಿಗೆ
ಇವರು ತಕ್ಕ ತಕ್ಕ
ಚಿತ್ರಗಳನ್ನು ತಯಾ
ರಿಸುತ್ತಾರೆ. ನಿಮ್ಮ
ನ್ನು ಆನಂದಗೊಳಿ



ಸುವ ಮುಖಚಿತ್ರ
ಗಳೂ, ಹಿಂಬದಿಯ
ಚಿತ್ರಗಳೂ, ಬೇರೆ
ಬಣ್ಣದ ಚಿತ್ರಗಳೂ
ಇವರ ಕುಂಚಗಳಿಂದ
ಲೇ ಹೊರಡುತ್ತವೆ.



ಚಿತ್ರಕಾರರು ತಯಾರಿ
ಸಿದ ಚಿತ್ರಗಳನ್ನು ಪ್ರೊಸೆ
ಸಿಂಗ್ ಶಾಖೆಗೆ ಸೇರಿದ
ಕೆಲಸಗಾರರು ಬ್ಲಾಕು
ಗಳಾಗಿ ತಯಾರಿಸುತ್ತಾರೆ.

"ಚಂದಮಾಮ" ಅಚ್ಚಾಫೀಸಿಗೆ ಸಂಬಂಧಿಸಿದ ಕೆಲವು ಶಾಖೆಗಳನ್ನು ಇಲ್ಲಿ ನೋಡಬಹದು. ಈ ಕಾರ್ಖಾನೆಯಲ್ಲಿ ದುರಸ್ತಿ ಮೊದಲಾದುವುಗಳು ನಡೆಯುತ್ತವೆ.





ಏಳು ಭಾಷೆಗಳಲ್ಲಿ "ಚಂದಮಾಮ"ಕ್ಕೆ ಅಚ್ಚುಮೊಳೆಜೋಡಿಸುವ ಕಂಪೋಜಿಟರುಗಳು.



ಮುಖಚಿತ್ರಗಳನ್ನು ಮುದ್ರಿಸುವ ಆಟೋಮ್ಯಾಟಿಕ್ ಮುದ್ರಣ ಯಂತ್ರಗಳು.

“ ಚಂದ ಮಾಮ ” ವನ್ನು ಮುದ್ರಿಸಲು ಆಧುನಿಕವಾದ ಯಂತ್ರಗಳು ಅಗತ್ಯ. ಇವು ಆ ಯಂತ್ರಗಳು.





ಇವುಗಳಲ್ಲಿ “ ಚಂದಮಾಮ” ಏಳು ಭಾಷೆಗಳಲ್ಲಿ ಪಂಚವರ್ಣಗಳಿಂದ ಮುದ್ದಾಗಿ ಮುದ್ರಣವಾಗುತ್ತದೆ



ಅಚ್ಚಾಗಿ ಬಂದ "ಚಂದಮಾಮ" ಫಾರಮುಗಳನ್ನು ಈ ಹುಡುಗರು ಮಡಚುತ್ತಾರೆ.



ತರುವಾಯ ಮಡಚಿದ ಫಾರಮುಗಳನ್ನು ಯಂತ್ರದ ಸಹಾಯದಿಂದ ಹೊಲಿಯುತ್ತಾರೆ.



ಅನಂತರ ಕಟಿಂಗ್ ಮಾಡಿ ಕಟ್ಟು ಕಟ್ಟುವರು.



ಯಾವ ಊರಿಗೆ ಎಷ್ಟು ಪ್ರತಿಗಳು ಹೋಗಬೇಕೋ ಆ ಪ್ರಕಾರ ಪಾರ್ಸೆಲ್ ಮಾಡಿ ಅದರಮೇಲೆ ಏಜಂಟುಗಳ ಹೆಸರು ವಿಳಾಸಗಳನ್ನು ಬರೆಯುತ್ತಾರೆ. ಹೀಗೆ ಕಟ್ಟಿದ ಪಾರ್ಸೆಲ್‌ಗಳು ಸಾವಿರಸಂಖ್ಯೆಯಲ್ಲಿ ವ್ಯಾನ್‌ಗಳಿಂದ ರೈಲ್ವೇ ಸ್ಟೇಷನ್‌ಗಳಿಗೂ, ಪೋಸ್ಟಾಫೀಸಿಗೂ, ಎಯಿರ್‌ಡ್ರೋಮಿಗೂ ಸೇರಿಸಲ್ಪಟ್ಟು, ಅಲ್ಲಿಂದ ನೂರೋ-ಸಾವಿರವೋ ಮೈಲು ಪ್ರಯಾಣಿಸಿ, ದೇಶದೊಳಗೆಲ್ಲಾ ಇರುವ ಎರಡುಲಕ್ಷ ಮನೆಗಳಿಗೆ "ಚಂದಮಾಮ" ಒಪ್ಪಿಸಲ್ಪಡುತ್ತವೆ.





"ಚಂದಮಾಮ"
ವ್ಯಾಪಾರಕ್ಕೆ ಸಂಬಂಧಿ
ಸಿದ ಜಮಾಖರ್ಚು
ಗಳನ್ನೂ, ಸುಮಾರು
ಮೂರುಸಾವಿರ ಏಜೆ
ನ್ಸಿಗಳನ್ನೂ, ಅವು





ಗಳಿಗೆ ಸಂಬಂಧಿ
ಸಿದ ಲೆಕ್ಕಗಳನ್ನೂ
ನೋಡಿಕೊಳ್ಳಲಿಕ್ಕೆ
ಬಹಳ ವಿಸ್ತಾರವಾದ
ಏರ್ಪಾಡು ಅಗತ್ಯ.

ಈ ಏರ್ಪಾಡಿಗೆ ಸಂಬಂಧ
ಪಟ್ಟ ವಿವರಗಳನ್ನು
ಇಲ್ಲಿ ನೋಡಬಹುದು.





"ಚಂದಮಾಮ" ನೊಂದಿಗೆ ಪರಿಚಯ ಮಾಡಿಕೊಳ್ಳಲಿಕ್ಕೆ ಪ್ರಮುಖದೇಶನಾಯಕರು ಕೂಡಾ ಬರುವುದೊಂದು ಆಶ್ಚರ್ಯವಲ್ಲ. ಹೀಗೆ ಬಂದವರಲ್ಲಿ ಕೇಂದ್ರ ಅರ್ಥ ಸಚಿವರೂ, ಅವರ ಸತೀಮಣಿ ಶ್ರೀಮತಿ ದುರ್ಗಾಬಾಯಿ ದೇಶಮುಖ್ ಕೂಡಾ ಇದ್ದಾರೆ. ಇವರು ಪ್ರೋಸೆಸ್ಸಿಗೆ ಬಂದು ಇಲ್ಲಿ ಜರುಗುವ ಕೆಲಸವನ್ನು ಬಹಳ ಆಸಕ್ತಿಯಿಂದ ಗಮನಿಸಿದರು.





ಹೀಗೆ ಬಂದು ನೋಡಿ ಆನಂದಿಸಿದ ಪ್ರೆಸ್ ಕಮಿಷನ್ ಸದಸ್ಯರು "ಚಂದಮಾಮವು ಪತ್ರಿಕೋದ್ಯಮಕ್ಕೊಂದು ಅಲಂಕಾರ" ಎಂದರು.

# ಪ್ರಿಯ ವಾಚಕರಿಗೆ
# ಸಮರ್ಪಣೆ



ತಮ್ಮ ಮಕ್ಕಳನ್ನು ಉತ್ತಮ ಭಾವೀ ಜನಾಂಗವಾಗಿ
ಮಾಡಿಕೊಳ್ಳುವುದರಲ್ಲಿ ಹಿರಿಯರಿಗೆ ಅನುಕೂಲಿಸುವ
ಸಾಹಿತ್ಯ ಸಾಧನವಾಗಿರಬೇಕೆಂಬ ಧ್ಯೇಯದಿಂದ ನಾವು
"ಚಂದಮಾಮ"ವನ್ನು ಒಪ್ಪಗೊಳಿಸಿದ್ದೇವೆ. ಹಿರಿಯರಿಗೆ ವಿಶ್ವಾಸ
ಪಾತ್ರವಾಗಿಯೂ, ಕಿರಿಯರಿಗೆ ಆಕರ್ಷಣೀಯವಾಗಿಯೂ ಇದ್ದು,
ಪ್ರತಿ ಕುಟುಂಬಕ್ಕೂ ಸೇವೆ ಮಾಡಬಲ್ಲಂತೆ "ಚಂದಮಾಮ"ವನ್ನು
ತಯಾರಿಸುವುದರಲ್ಲಿ ಶ್ರದ್ಧೆ ವಹಿಸಿದ್ದೇವೆ. ಯಾವೊಂದು
ಕುಟುಂಬಕ್ಕೆ "ಚಂದಮಾಮ"ನಿಂದ ಸೇವೆ ನಡೆಯಿತೆಂದಾದರೆ
ಪ್ರಕಾಶಕರು ತಮ್ಮ ಧ್ಯೇಯವು ಫಲಿಸಿದಂತೆ ಭಾವಿಸುತ್ತಾರೆ.



Photo by B. Bhansali



ಬಹುಮಾನ
ಪಡೆದ ಶೀರ್ಷಿಕೆ

ಇದೆಂಥ ಧೈರ್ಯ!

ಕಳಿಸಿದವರು:
ಜಿ. ಗಿರಿಜ

